Koravanji

# ಕೊರವಂಜಿ

ಡಿಸಂಬರ್ ೧೯೫೧



ಸಂಪಾದಕರು :

ಶ್ರೀ|| ರಾ. ಶಿ.

ಬರಹಗಾರರು :

ಶ್ರೀ|| ಕುಮಾರ್
ಶ್ರೀ|| ಬುಳ್ಳ
ಶ್ರೀ|| ಪ್ರಸಾದ್
ಶ್ರೀ|| ಸಿ.
ಶ್ರೀ|| ದಾಶರಥಿ ದೀಕ್ಷಿತ್
ಶ್ರೀ|| ನಿರಂಗ
ಶ್ರೀಮತಿ ಸುನಂದಮ್ಮ
ಶ್ರೀಮತಿ ಸರೋಜಿನಿ ಅರೂರ್
ಶ್ರೀ|| ಹಾರು
ಶ್ರೀ|| ಎ. ಎಸ್. ರಾಮಕೃಷ್ಣ
ಶ್ರೀ|| ನಾಗ
ಶ್ರೀ|| "ಶನಿ"
ಶ್ರೀ|| ಶಿವು

ಇತ್ಯಾದಿ, ಇತ್ಯಾದಿ.

ತಿಳಿನಗೆಯ ಮಾಸಪತ್ರಿಕೆ

ಬಿಡಿ ಪ್ರತಿ:— ಕೇವಲ ನಾಲ್ಕಾಣೆ



In your Make-up Locks Count a lot...

# RAJA
## AMLA
### HAIR OIL






**MANYAM & CO.,** BANGALORE - MADRAS - MADURA - BOMBAY.





ಪ್ರತಿ ಕೆಲಸಕ್ಕೂ ಪ್ರತ್ಯೇಕವಾದ





ಷಾಲಿಮಾರ್ ಪೆಯಿಂಟ್





ಇದೆ





ಜಾಣರು ಷಾಲಿಮಾರ್ ಪೆಯಿಂಟನ್ನೇ





ಉಪಯೋಗಿಸುತ್ತಾರೆ

SPX 83A KN






SHALIMAR PAINT, COLOUR & VARNISH CO., LTD.

POST BOX 136, MADRAS 1




ಸಂಪುಟ ೧೦ | ಡಿಸೆಂಬರ್ ೧೯೫೧ | ಸಂಚಿಕೆ ೯

## ಕುಹಕಿಡಿಗಳು

* *

ಚಪ್ಪಲಿ ಬೂಡ್ಸುಗಳ ವ್ಯಾಪಾರಸ್ಥನೊಬ್ಬನು ಈಗ ಲೋಕ ಸಭೆಗೆ ಉಮೇದುವಾರನಾಗಿದ್ದಾನಂತೆ.

— ಯಥಾಪ್ರಕಾರ — ಬಂದವರ ಕಾಲು ಹಿಡಿಯುತ್ತಿದ್ದಾನಂತೆ!

* * *

ಚುನಾವಣೆಯ ಕಾಲಬಂದರೆ ನೋಡಿ—ಚಿರತೆ ಕುರಿ ಎರಡೂ ಒಂದೇ ಬಟ್ಟಲಲ್ಲಿ ನೀರು ಕುಡಿಯುತ್ತೆ ಎಂದೊಬ್ಬರು ಬರೆದಿದ್ದಾರೆ.

—ಈವೆರಡು ಪ್ರಾಣಿಗಳೂ ಸಂಕೇತಗಳೇ?

* * *

ಹಾ!! ಮಾಸಡಿಕ್ ಅವರು ಪರ್ಷಿಯಾಕ್ಕೆ ಹಿಂದಿರುಗಿದಾಗ, ಒಬ್ಬಾತ ಅವರ ಮೋಟಾರಿನ ಕೆಳಗೆ ಸಿಕ್ಕಿಹಾಕಿಕೊಂಡು ಆತ್ಮ ಬಲಿಯನ್ನು ಕೊಡಲು ಹೋದನಂತೆ.

—ಏನು ಮಹಾ! ಆಹಾರ ಸಚಿವರು ಬರುತ್ತಾರೆ ಎಂಬ ಸಂತೋಷದಿಂದಲೇ ನಮ್ಮೂರಿನ ತಿರುಕರು ಹಾಯಾಗಿ ಪ್ರಾಣಬಲಿ ತೆರುತ್ತಾರೆ.

* * *

ಚುನಾವಣೆ ಕಾಲ ಹತ್ತಿರ ಹತ್ತಿರ ಬಂದಹಾಗೆಲ್ಲಾ ಕಾಯಕಲ್ಪ ಮಾಡಿಸಿಕೊಳ್ಳುವವರ ಸಂಖ್ಯೆ ಹೆಚ್ಚಾಗುತ್ತಿದೆ. (ಸುದ್ಧಿ)

—ಯಾಕೆ! ಕಾಯಕಲ್ಪ ಮಾಡಿಸಿಕೊಂಡರೆ ಚರ್ಮಾನೂ ದಪ್ಪನಾಗುತ್ತದೆಯೇ?

*　　　*　　　*

ಹಿಂದೂ ಕೋಡ್‌ಬಿಲ್ ಕಾನೂನಾಗಿದ್ದರೆ—ಸ್ವರ್ಗದಲ್ಲಿಯೂ ಕೂಡ ಸಾಧ್ಯವಾಗದೇ ಇದ್ದ ವಿವಾಹ ವಿಚ್ಛೇದನ ನಮ್ಮಲ್ಲಿ ಆಗಬಹುದಾಗಿತ್ತು. (ಹೇಳಿಕೆ)

—ಸ್ವರ್ಗದಲ್ಲಿ ವಿವಾಹ ವಿಚ್ಛೇದನ ಹೇಗಾದೀತು? ಅಲ್ಲಿ ಲಾಯರುಗಳೇ ಇಲ್ಲವಲ್ಲ!!

*　　　*　　　*

ಮೊನ್ನೆ ಮುನಿಸಿಪಲ್ ಕಚೇರಿಯ ಹತ್ತಿರ ಒಬ್ಬಾತ ಬೈಸಿಕಲ್ಲಿಂದ ಬಿದ್ದು—ಅಪ್ಪಾಲೆ ತಿಪ್ಪಾಲೆ ಸುತ್ತಿ-ತಿರುಗಿ ಹಾರಿ ಬೈಸಿಕಲ್ಲಿನ ಮೇಲೆ ಸವಾರಿ ಮಾಡಿದ ನಂತೆ—(ಪತ್ರಿಕೆ)

—ಚುನಾವಣೆ ಕಾಲ ಸ್ವಾಮಿ!!

*　　　*　　　*

ಸಂಗೀತದಿಂದ ಜನರು ಬೇಗ ಬೇಗ ಆಡ್ಡಾಡಲು ಸಾಧ್ಯ—(ಭಾಷಣ)

—ಮೋಟಾರು ಕೊಂಬನ್ನು (ಅರ್ಥವಾಯ್ತೆ ಕನ್ನಡ) ಸಂಗೀತವಾದ್ಯ ಎಂದರೆ ನಾವು ಒಪ್ಪುತ್ತೇವೆ.

*　　　*　　　*

ಜೀವನದಲ್ಲಿ ಬೇಜಾರು ತಪ್ಪಬೇಕಾದರೆ ಮದುವೆಯಾಗಬೇಕು·(ಬ್ರಹ್ಮಚಾರಿ)

—ಜೀವನದ ಬೇಜಾರು ತಪ್ಪಬಹುದು? ಆದರೆ ಹೆಂಡತಿ ಬೇಜಾರು?

*　　　*　　　*

ಒಂದು ಒಳ್ಳೆಯ ಕೆಲಸ ಮಾಡಿದರೆ, ಅದು ನಾವು ಸತ್ತಮೇಲೆ ಬೆಳೆಯುತ್ತದೆ. (ಸ್ವಾಮಿಜೀ)

—ಆಹಾ! ಕೈಲಾಸಂ ಬದುಕಿದ್ದಾಗ ಹೇಳಿದ ಹತ್ತುಸಾವಿರ ಕುಹಕಿಡಿಗಳು ಅತ ಸತ್ತಮೇಲೆ ಈಗ ೧೦೦ ಸಾವಿರ ಆಗಿಲ್ಲವೆ?

*　　　*　　　*

ಕಾದಂಬರಿಕಾರರೂ—ಉಮೋದುವಾರರೂ—ತಮ್ಮ ಆತ್ಮೋಲ್ಲಾಸಕ್ಕೆ ಮಾತ್ರ ಬರೆಯುತ್ತಾರಂತೆ—

—ಈ ಒಪ್ಪಿಗೆಯನ್ನು ನಾವೂ ಅನುಮೋದಿಸುತ್ತೇವೆ.

———o———

# ಉರಿಗಾಳಿ

ಬಿಹಾರು ಚುನಾವಣೆ ಪ್ರಯೋಗವು ಸಂಸ್ಥಾನಾದ್ಯಂತ ಜನವರಿ ತಿಂಗಳ ನಲ್ಲಿ ನಡೆಯುತ್ತದೆ ಎಂದು ಕಮ್ಯೂನಿಸ್ಟರೊಬ್ಬರು ಹೇಳಿಕೆ ಕೊಟ್ಟಿದ್ದಾರೆ.

*　　*　　*

ರಿಸರ್ವ್ ಬ್ಯಾಂಕ್ ದರ ಶೇಕಡ ೩ ರಿಂದ ೩॥ಗೆ ಏರಿಸಲ್ಪಟ್ಟಿತಂತೆ.

—ನಮ್ಮ ಮಾರ್ವಾಡೀಗೆ ಇದರಲ್ಲಿ ಏನೇನೂ ಉತ್ಸಾಹವಿಲ್ಲ. ನಮಗೆ ತಿಂಗಳಿಗೆ ಬರೋದನ್ನ ಅವರು ವರ್ಷಕ್ಕೆ ಕೊಡ್ತಾರೆ ಅಂತ.

*　　*　　*

ಹಿಮಾಚಲ ಪ್ರದೇಶದಲ್ಲಿ ಕುರುಡು ಹೆಂಗಸು ಓಟು ಮಾಡಿದಳಂತೆ.

—ಮಿಕ್ಕ ಕಡೆ ಕುರುಡರ ಸಂಖ್ಯೆ ಅಪರಿಮಿತವಾದ್ದರಿಂದ ಅವರ ಹೆಸರುಗಳನ್ನು ಪ್ರಚುರ ಪಡಿಸಲಿಲ್ಲ ಎಂದು ಠೇವಣಾತಿ ಕಳೆದುಕೊಂಡವರು ಹೇಳುತ್ತಾರಂತೆ.

*　　*　　*

ಚೀನಾ ದೇಶದ ಪ್ರತಿನಿಧಿಗಳು ಮೊನ್ನೆ ನಮ್ಮೂರಿಗೆ ಬಂದು ಚೀನಿಯಲ್ಲಿ ಭಾಷಣ ಮಾಡಿದಾಗ ಅದು ನಮಗೆ ತಿಳಿಯದೆ ಇರುವುದು ಹಾಗಿರಲಿ.

—ನಮ್ಮೂರಿನಲ್ಲಿ ನೆಲಸಿ ಚೀನೀ ಹೋಟಲುಗಳನ್ನಿಟ್ಟವರಿಗೂ ಅರ್ಥವೇ ಆಗಲಿಲ್ಲವಂತೆ.

*　　*　　*

ಪೂರ್ವ ಮತ್ತು ಪಶ್ಚಿಮ ಮಹಾರಾಷ್ಟ್ರಗಳಲ್ಲಿ ಪರಸ್ಪರ ನಂಬಿಕೆ ಮತ್ತು ಶಾಂತಿ ಏರ್ಪಡಿಸಲು ಪ್ರಪಂಚ ಸಂಸ್ಥೆಯಲ್ಲಿ ಭಾರತ ನಿರ್ಣಯ ತರಲಿದೆಯಂತೆ.

—ನಮಗೆ ಆಚಾರ್ರಹಾಗೆ ಹೇಳೋ ಬದಲು, ಕಾಶ್ಮೀರದಲ್ಲಿ ಮಾಡಿ ತೋರಿಸಬಾರದೆ ಎಂದು ಕುಹಕಿಗಳು ಇನ್ನೂ ಅಂದಿಲ್ಲವಂತೆ.

*　　*　　*

ಪಕ್ಷಗಳ ಘೋಷಣೆಗಳನ್ನು ವಿಮರ್ಶಿಸಿ ನಿಮ್ಮ ಬೆಂಬಲ ನೀಡಿ.

(ಪಂ॥ ನೆಹ್ರೂ)

—ಸದ್ಯ! ಹಾಗಂದರಲ್ಲಾ! ಅದ್ಮಿಗಳ ಚರಿತ್ರೆ ನೋಡಿ ಓಟು ಮಾಡಿ ಎಂದು ಹೇಳಲಿಲ್ಲವಲ್ಲಾ!! ಎಂದು ಕೆಲವು ಉಮೇದುವಾರರ ಖುಷಿಯಾದರಂತೆ.

*　　*　　*

ಪಂ॥ ನೆಹ್ರೂ ಅವರು ರಾಜಾಜೀಯವರೊಡನೆ ೮೫ ನಿಮಿಷ ಮಾತ ನಾಡಿದ್ದು ಏನು ಎಂದರೆ—"ನಿಮ್ಮ ಹಾಗೆ ನನಗೆ ಯಾವಾಗ ವಿಶ್ರಾಂತಿ ಸಿಗುತ್ತದೆ" ಎಂದಲ್ಲವಂತೆ.

* * *

ಡಾ॥ ಅಬ್ರಹಾಂ ಸ್ಟೋನ್‌ರವರು ಮಿತ ಸಂಸಾರದ ವಿಚಾರ ಬೊಂಬಾಯಿನಲ್ಲಿ ಭಾಷಣ ಮಾಡಿದರಂತೆ.

—ಈಗಾಗಲೇ ಪಾನನಿರೋಧ ನಮ್ಮೂರಲ್ಲಿ ಆಗಿದೆ. ಮಿಕ್ಕ ನಿರೋಧಗಳು ತಾವಾಗಿಯೇ ಆಗುತ್ತವೆ ಎಂದೊಬ್ಬರು ಅವರಿಗೆ ಹೇಳಿದರಂತೆ.

* * *

ಮದ್ರಾಸಿನ ಮ್ಯೂಸಿಯಂನಲ್ಲಿ ಶಿವ ಪಾರ್ವತಿಯರ ಚಿತ್ರ ಇರುವ ಹೈದರಾಲಿ ಕಾಲದ ನಾಣ್ಯಗಳಿವೆಯಂತೆ.

—ಅಂದರೆ ಹೈದರಾಲಿಯ ಪೂರ್ವಿಕರು ಶೈವ ಮತಸ್ಥರು ಎಂದು ಇನ್ನೂ ನಿರ್ಧರಿಸಿಲ್ಲವಂತೆ.

* * *

ಸರ್ದಾರ್ ಪನ್ನಿಕರ್ ಅವರು ಲಂಡನ್ನಿಗೆ ಹೋಗಿದ್ದಾರಂತೆ.

—ಚೀನಾದೇಶವು ಕಮ್ಯೂನಿಸ್ಟ್ ಅಲ್ಲ ಅಂತ ಚರ್ಚಿಲ್ಲನಿಗೆ ಹೇಳುವುದಕ್ಕಲ್ಲವಂತೆ.

* * *

ಓಟು ಕೊಡು ಅಂತ ಆತನ ಕೇಳಿದರೆ—ಆ ಕೂಡಲೆ ಆತ ಐದು ರೂಪಾಯಿ ಸಾಲ ಕೊಡು ಎನ್ನಬಹುದೇ?

* * *

ಈ ಸಾರಿ ಕ್ರಿಸ್‌ಮಸ್ ಹಬ್ಬಕ್ಕೆ ಕಾಗದದ ಲಾಟೀನುಗಳನ್ನ ಕಟ್ಟಿ ಮನೆ ಅಲಂಕರಿಸಲಾಗುವುದಿಲ್ಲವಂತೆ.

—ಇದ್ದ ಕಾಗದಗಳನ್ನೆಲ್ಲಾ ಚುನಾವಣೆ ಪ್ರಯುಕ್ತ ಮೀಸಲಾಗಿಟ್ಟಿದ್ದಾರಂತೆ.

* * *

ಸ್ಟಾಲಿನ್ ಅವರು ಟರ್ಕಿಗೆ ಕ್ರಿಸ್‌ಮಸ್ ಶುಭಾಶಯಗಳನ್ನು ಕಳಿಸಿದರೆ—ಟರ್ಕಿ ಬೆದರುವುದೇ ಎಂದು ಓದುಗರೊಬ್ಬರು ಕೇಳಿದ್ದಾರೆ.

---

# ನಮ್ಮೂರಿನ ಆಯ್ಕೆ

---

ಕವಾಡಿಗರ ಚೆನ್ನಪ್ಪ ನಮ್ಮೂರಿನಲ್ಲಿ ಹೆಸರಾದವ. ಊರಿನಲ್ಲಿದ್ದ ಎಲ್ಲಾ ಎಮ್ಮೆಗಳೂ ಅವನದೇ. ಹಸುಗಳೂ ಅವನದೇ. ಅಂದ ಮೇಲೆ ಊರಿನ ಹಾಲಿನ ಸರಬರಾಜೆಲ್ಲಾ ಅವನ ಮುಖಾಂತರವೇ. ಚಿಕ್ಕ ಪುಟ್ಟ ಕವಾಡಿಗರನ್ನ ತನ್ನ ಸಹಾಯಕ್ಕಾಗಿರಿಸಿಕೊಂಡು ರಾಜನಂತೆ ಇದ್ದ.

ನವೆಂಬರ್ ಒಂಭತ್ತನೆಯ ತಾರೀಖು. ಮನೇಲಿ ಕಾಫಿ ಬಲು ರುಚಿಯಾಗಿತ್ತು. ಊಟ ಮಾಡುವಾಗ ಮೊಸರು ಬಲು ಹಿತವಾಗಿತ್ತು. ಏನೋ ಇದರ ಮರ್ಮ ಎಂದು ನನ್ನ ಹೆಂಡತೀನ ಕೇಳಿದೆ. ನನಗಾಗಲೇ ಗಾಬರಿ ಆವಳೇನಾದರೂ ಸುಲಿಗೆ ಮಾಡಲು ಈ ಮುನ್ಸೂಚನೆಯೋ ಅಂತ. ಆವಳಂದಳು ಇವತ್ತು ಹಾಲು ಬಲು ಚೆನ್ನಾಗಿದೆ ಅಂದರೆ. ಎಮ್ಮೆಗಳು ನೀರು ಕುಡಿಯಲೇ ಇಲ್ಲ ಅಂತ ಕಾಣುತ್ತೆ, ಅಷ್ಟು ಗಟ್ಟಿಯಾಗಿದೆ ಎಂದಳು.

ಕಚೇರೀಲಿ ಈ ಸೋಜಿಗ ಹೇಳಿದೆ ಎಲ್ಲರೂ ನಮ್ಮನೆಯಲ್ಲೂ ಹಾಗೇ ಕಣ್ರಿ, ಇವತ್ತು ಹಾಲು ಗಟ್ಟಿ. ಮೊಸರು ಬಲು ರುಚಿ ಅಂದರು. ಇದೇನು ಮಾಯೆ! ಅಂತ ಎಲ್ಲರೂ ಗಡ್ಡ ತುರಿಸುತ್ತಾ ಇದ್ದಾಗ, ನಮ್ಮ ಇಂದಾ—ಗೆ ಗುಮಾಸ್ತೆ ತಾತಯ್ಯ ಬಂದರು. ತಾತಯ್ಯ ಮುಂದಿನ ವರ್ಷ ರಿಟೈರಾಗೋರು. ನಮ್ಮೆಲ್ಲರ ಮನೆಗೂ ಒಳ್ಳೆಯದಕ್ಕೂ ಕೆಟ್ಟದಕ್ಕೂ ಆತನೇ ಸಹಾಯಕ. ಅವರಿಗೆ ಈ ಸೋಜಿಗ ತಿಳಿಸಿದೆವು. "ನಮ್ಮನೇಲೂ ಹಾಗೇ ಕಣ್ರೋ ಅದಕ್ಕೇ ನಾನು ನನ್ನ ಹೆಂಡತೀನ ಕೇಳಿದೆ ಏನೆ ಹಾಲಿನ ಬಾಕಿ ಗೀಕಿ ಏನಾದರೂ ಎಲ್ಲಾನೂ ತೀರಿಸಿಬಿಟ್ಟೆಯಾ ಅಂತ" ನಾನು ಹೇಗೆ ತೀರಿಸಲಿ, ಹುಣಸೇ ಬೀಜದಲ್ಲೀ ಅಂತ ಆಕೆ ಲೊಟಕಿದ ಮೇಲೆಯೋ ನನಗೆ ಅರ್ಥವಾಗಿದ್ದು ಅದಲ್ಲ ಕಾರಣ ಅಂತ ಕಛೇರಿಗೆ ಬರ್ತಾ ಚೆನ್ನಪ್ಪನ ಮನೆ ಮುಂದೇನೆ ಬಂದೆ. ಅಲ್ಲಿ ಸ್ವಲ್ಪ ಜನರ ಗಲಾಟೆ ಇತ್ತು. ಏನಪ್ಪಾ ಅಂತ ವಿಚಾರಿಸಿದೆ. ಕವಾಡಿಗರ ಚನ್ನಪ್ಪ ಚುನಾವಣೆಗೆ ನಿಂತಿದ್ದಾನೆ ಅಂತ ತಿಳಿಯಿತು. ಈಗ ಅರ್ಥವಾಯ್ತಲ್ಲ ಹಾಲು ಮೊಸರು ಯಾಕೆ ಊರಲ್ಲೆಲ್ಲಾ ಚೆನ್ನ ಅಂತ, ಎಂದು ವಿಶದೀಕರಿಸಿದ.

ಏನೇ ಕಾರಣ ಇರಲಿ. ಚೆನ್ನಪ್ಪನ ಮನೆ ಹಿಂದೆ ಎಂಟೆಮ್ಮೆ ಹಗಲೂ ರಾತ್ರಿ ಕರೀಲಿ, ಅವನಿಗೇ ನಾವೆಲ್ಲ 'ಮತ' ಕೊಟ್ಟು ಆಯ್ಕೆ ಮಾಡೋಣ ಅಂತ ಮನಸ್ಸಿನಲ್ಲಿಯೇ ಅವನಿಗೆ ಬೆಂಬಲ ಕೊಟ್ಟೆವು.

ಸ್ವಾತಂತ್ರ್ಯ ಬಂದಾಗ ಊರಲ್ಲೆಲ್ಲಾ ಹಾಲ್ಜೇನು ಹೊಳೆ ಹರಿಸುತ್ತೇವೆ ಅಂದ ಮುಖಂಡರೆಲ್ಲಾ ನಾಲ್ಕು ವರ್ಷ ಕಣ್ಣೀರ ಹೊಳೆ ಹರಿಸಿದ್ದುದು ಎಲ್ಲರಿಗೂ ತಿಳಿದ ವಿಷಯ. ಆದರೆ ಆಯ್ಕೆಗೆ ನಿಂತ ದಿನದಿಂದಲೇ, ನಮ್ಮೂರಿನ ಮಟ್ಟಿಗೆ ಚೆನ್ನಯ್ಯ ಹಾಲು ಹೊಳೆ ಹರಿಸಿಯೇ ಬಿಟ್ಟ. ಆಯ್ಕೆಯ ದಿನಾನ ಅದಷ್ಟು ಮುಂದಕ್ಕೆ ನಮ್ಮ ಸರ್ಕಾರ ಹಾಕಬಾರದೇ! ಅಷ್ಟು ದಿನವಾದರೂ ಹಾಲುಂಡು, ಮೊಸರು ತಿಂದು ಸುಖವಾಗಿರಬಹುದು ಎಂದು ನಮ್ಮೆಲ್ಲರಿಗೂ ಅನ್ನಿಸಿತು.

ಹದಿನೈದು ದಿನ ಊರಲ್ಲೆಲ್ಲಾ ಬೆಳದಿಂಗಳು ಚೆಲ್ಲಿದ ಹಾಗೆ ಹಾಲು ಚೆಲ್ಲಲ್ಪಟ್ಟಿತ್ತು.

ಶನಿವಾರ. ಬೆಳಿಗ್ಗೆ ಕಛೇರಿ ಅಂತ ಬೇಗ ಹೊರಡುವಾಗ ಕೊಟ್ಟ ಕಾಫಿ ಗಂಟಲೇ ಇಳಿಯಲೊಲ್ಲದು. ಆಸ್ಪತ್ರೆ ಔಷಧಿ ವಾಶಿ ಅನ್ನೋಹಾಗಿತ್ತು ಆತುರದಲ್ಲಿ ಬೈಗಳನ್ನ ನುಂಗೋಹಾಗೆ ನುಂಗಿ ಕಛೇರಿಗೆ ಹೋದೆ ಎಲ್ಲರ ಮುಖದಲ್ಲೂ ಬೇಸರ. ಎಲ್ಲರ ಬಾಯಲ್ಲೂ ಇದೇ ಮಾತು. ಯಾಕೆ ಹೀಗಾಯ್ತು. ಹಾಲು ತಿರುಗಿ ತನ್ನ ಯಥಾಸ್ಥಿತಿಗೆ ಬರಲು ಕಾರಣವೇನು. ಚೆನ್ನಪ್ಪನಿಗೆ ನಮ್ಮ ಬೆಂಬಲ ಸಿಗದೇ ಇರಬಹುದು ಅಂತ ಹೆದರಿಕೇನೇ? ಈ ರೀತಿ ಪ್ರಶ್ನೆಗಳು ಒಂದರ ಹಿಂದೊಂದು ಒಂದರ ಮೇಲೊಂದು ತಾವಾಗಿಯೇ ಬರುತ್ತಿತ್ತು.

ಅಷ್ಟು ಹೊತ್ತಿಗೆ ಇಂದಾ—ಗೆ ತಾತಯ್ಯ ಬಂದರು. ಎಲ್ಲರೂ ಅವರನ್ನ ಸುತ್ತುಗಟ್ಟಿದೆವು ಆಗ ತಾತಯ್ಯ ಹೇಳಿದರು.

ಬೆಳಿಗ್ಗೆ ಸಂಧ್ಯಾವಂದನೆ ಮಾಡಿ ಕಾಫಿ ಕುಡಿದೆ. ಮೊದಲು ಗುಟಕಿಗೇ ನಾಲಿಗೆ ಕಣ್ಣುಗುಡ್ಡೇನ ಹೊರಕ್ಕೆ ನೂಕಿತು. ಹೆಂಡತಿ ಮುಖ ನೋಡಿದೆ. ನಾನೇನು ಮಾಡಲಿ ಹಾಲು ಒಲು ನೀರು ಅಂದಳು. ಬೇಗ ತಲೆಗೆ ಸಿಂಬಿ ಸುತ್ತಿ ಚೆನ್ನಯ್ಯನ ಮನೆಗೆ ಹೋದೆ. "ಏನು ಚೆನ್ನಯ್ಯಾ! ಹೀಗೆ ಮಾಡಬಹುದೇ? ಇಷ್ಟು ದಿನ ನಾವೆಲ್ಲಾ ಸೇರಿ ನಿನಗೇ 'ಮತ' ಕೊಟ್ಟು ನಿನ್ನನ್ನೇ ಅಸೆಂಬ್ಲಿಗೆ ಮೆಂಬರಾಗಿ ಕಳಿಸಬೇಕು ಅಂತ ಇಷ್ಟು ಪ್ರಯಾಸ ಪಡುತ್ತಾ ಇದ್ದೆವು. ಇನ್ನು ಚುನಾವಣೆಗೆ ೧ ತಿಂಗಳಿದೆ ಈಗಲೇ ನೀನು ಹಾಲನ್ನು ಹೀಗೆ ಸರಬರಾಜು ಮಾಡಿದರೆ ನಿನ್ನ ಠೇವಣಾತೀನೇ ಕಳೆದುಕೋಬೇಕಾಗುತ್ತಲ್ಲ" ಅಂತ ಹೇಳಿದೆ.

ಕೆಂಪು ಚೌಕಳಿ ಲಪ್ಪಟೆ ತಲೆಗೆ ಸುತ್ತಿದ್ದ. ಗಿರ್ಕಿ ಮಿಾಸೆಯ ಎಡ ತುದಿಯ ಮೇಲೆ ಬೆರಳಾಡಿಸುತ್ತಾ ಆತ ಏನಂದ ಗೊತ್ತೆ? 'ತಾತಯ್ಯಾ! ಯಾರ ಮಾತೋ ಕೇಳಿ ನಾನೂ ಮೆಂಬರಾಗಲು ನಿಂತೆ ಆಗಲೇ ಐನೂರು ರೂಪಾಯಿ ನಷ್ಟ ಇನ್ನೊಂದು ತಿಂಗಳು ಹೀಗೆ ನಡೆಸಿದರೆ ಎರಡೆಮ್ಕೆ ಮಾರಲೇಬೇಕು ಅನ್ನೊ ಸ್ಥಿತಿ ಖಂಡಿತಾ ಅಂತ ಗೊತ್ತಾಯ್ತು. ಅಷ್ಟರಲ್ಲೇ, ಎದುರು ಬೀದಿ ಲಕ್ಕಪ್ಪ ಬಂದು, ನೋಡು ಚೆನ್ನಪ್ಪಾ. ನೀನು ಊರಿನ ಹಾಲಿಗೆಲ್ಲಾ ಯಜಮಾನ. ಊರಿನ ಇಜ್ಜಲು ಸರಬರಾಜೆಲ್ಲಾ ನಂದು. ಈಗ ಹದಿನೈದು ದಿನ ದಿಂದ ತುಂಬಿದ ಮೂಟೇನ ಮೋಸ ಇಲ್ಲದೆ ಮಾರುಕ್ಕೆ ಹೋಗಿ ಮುನ್ನೂರು ಕಳಕೊಂಡಿದ್ದೀನಿ. ನಿಂಗೂ ನಷ್ಟ ಆಗೆ ಇರಬೇಕು ನಿನ್ನ ನಷ್ಟ ಕಟ್ಟಿಕೊಡ್ತೀನಿ. ನೀನು ಉಮೇದು ವಾರಿಕೆ ಹಿಂತೆಗೆದುಕೋ ಇಲ್ಲ ನನ್ನ ನಷ್ಟ ಕಟ್ಟಿಕೊಡು ನನ್ನ ಉಮೇದುವಾರಿಕೆ ನಾನು ವಾಪಸ್ಸು ಪಡೆಯುತ್ತೀನೆ. ಆಗ ಮೆಂಬರೂ ಆಗಬಹುದು ಆದ ನಷ್ಟಾನೆಲ್ಲಾ ಎರಡೇ ತಿಂಗಳಲ್ಲಿ ಸರೀನೂ ಮಾಡಿಕೋ ಬಹುದು ಅಂತ ಅವನು ಹೇಳಿದ್ದು ದಿಟ ಅಂತ ತಿಳೀತು. ನನಗೆ ಐನೂರಾಗಿದೆ ನಷ್ಟ ಅಂತ ಹೇಳಿದೆ. ಐನೂರು ರೂಪಾಯಿ ಎಣಿಸಿದ. ನನ್ನ ಉಮೇದು ವಾರಿಕೆ ವಾಪಸ್ಸು ಪಡೆದೆ ನಿನ್ನೆ ಸಾಯಂಕಾಲ. ಕೊನೇ ದಿವಸ, ಅಂತ ಹೇಳಿದ.

ತಾತಯ್ಯ ಇದನ್ನು ನಮಗೆ ಹೇಳಿ ನೋಡ್ರೋ! ಲಕ್ಕಪ್ಪಾ ಈಗ ಅವಿರೋಧವಾಗಿ ಆಯ್ಕೆ ಆಗಿಬಿಟ್ಟ ಅಂದರೆ ಮೊದಲಿನಂತೆ ಮುಕ್ಕಾಲು ಚೀಲ ಪುಡಿ ಇದ್ದಿಲೇ ಗತಿ. ಚೆನ್ನಪ್ಪ ತನ್ನ ನಷ್ಟಾನೆಲ್ಲಾ ವಾಪಸ್ಸು ಪಡೆದ. ಇನ್ನು ನಮ್ಮ ಹಾಲೂ ಮೊಸರು ಕಲ್ಲು ದೇವರಿಗೇ ಪ್ರೀತಿ! ಏನ್ರೋ ಮಾಡೋದು ಅಂತ ದೀರ್ಘವಾಗಿ ಉಸಿರೆಳೆದ.

ನಾವೆಲ್ಲರೂ ಸುಸ್ತಾಗಿ ಭವಿಷ್ಯದ ಯೋಚನೆ ಮಾಡಲಾರದೇ ಅವನ ಜತೆಗೆ ನಿಟ್ಟುಸಿರನ್ನು ನಾವೂ ಎಳೆದೆವು.

—ಕುಮಾರ್.

---

## ರ—ರ—ಹರಹರ!

ಹೊಟ್ಟೆಗೆ ಬಟ್ಟೆಗೆ ಬರ,
ಬೆಕ್ಕಿಗೆ ಬಂದಿತು ಜರ,
ಕೆಟ್ಟಿತು ನಾಯಕ ಶಿರ,
ಸಡಲಿತು ನಾಲಗೆ ನರ,
ಕುಗ್ಗಿತು ಜನಗಳ ಸೊರ,
ಕೊಟ್ಟರೆ ಓಟು, ಹರಹರ!

—ಬಾಳ್ಕ.

# ಸತ್ಯಮೇವ ಜಯತೇ

ವ್ಯಾಪಾರ ಮಾಡೋವಾಗ ಎಲ್ಲಿ ಸುಲಭವಾಗಿ ಸಿಕ್ಕುತ್ತೆ ಎಲ್ಲಿ ಚೆನ್ನಾಗಿ ಮಾರಬಹುದು ಅದನ್ನು ಯೋಚಿಸಬೇಕು, ಇಲ್ಲದೇ ಇದ್ದರೆ ಲಕ್ಷ್ಮಿ ನಮ್ಮ ಹತ್ತಿರ ಕೂಡಾ ಸೇರುಲ್ಲ ಅಂದ ಧರ್ಮಸಾಗರು. ಕಾಲು ರೂಪಾಯಿನ ಹಾಗೆ ನನ ಕ್ರಿತ ಕಾಗದ ಕೊಂಡು, ಬೇರೆ ದೇಶಕ್ಕೆ ರೂಪಾಯಿನಂತೆ ಮಾರಿ ಮಹಡಿ ಮನೆ ಕಟ್ಟಿಸಿ, ತನ್ನ ತಾಯಿ ಹೆಸರಿನಲ್ಲಿ ಒಂದು ದೇವಸ್ಥಾನಾನೂ ಕಟ್ಟಿಸಿದ.

ದೊಡ್ಡ ಮೀನು ದೊಡ್ಡದಾಗಿ ಬಾಯಿ ಬಿಡುತ್ತೆ ಅದಕ್ಕೇ ಸಣ್ಣ ಮೀನು ಅದರ ಬಾಯಿಗೆ ಬೀಳುತ್ತೆ ಅದೇ ಮರ್ಮ ಜೀವನದಲ್ಲಿ. ದೊಡ್ಡದಾಗಿ ಬಾಯಿ ಬಿಟ್ಟು ಅರಿಚಬೇಕು. ಅಷ್ಟು ದೊಡ್ಡ ಬಾಯಿಲ್ಲದವರು ಇವರ ಬಾಯಿಗೆ ಬೀಳುತ್ತಾರೆ ಎಂದ. ಕಂಪನೀ ವ್ಯವಸ್ಥಾಪಕ ಒಬ್ಬ.

ದೇವರಿಗೆ ನೇವೇದ್ಯ ಅಂತ ಮಾಡಿ ನಾವು ಪ್ರಸಾದ ಹಂಚಿಕೋಬೇಕಯ್ಯಾ! ಅದೇ ಜೀವನದ ತಿರುಳು. ಎಂದ ಶಿವ ಕೂಟದ ಮುತ್ಸದ್ದಿ. ದೊಡ್ಡೋರ ಹೆಸರು ಹೇಳಿ ಚಿಕ್ಕೋರ ಹತ್ತಿರ ಸುಲಿಗೆ ಮಾಡಿದರೆ, ದೊಡ್ಡೋರ ಕಿವೀಗೂ ಬೀಳೋದಿಲ್ಲ. ಚಿಕ್ಕೋರು ಚಾಡಿ ಹೇಳುಕ್ಕೂ ಹೆದರ್ತಾರೆ ಅಂತ ಹೇಳಿ ತನ್ನ ಗೂಡಿಗೆಲ್ಲಾ ಗುನ್ನಾಂಪಟ್ಟಿ ಹತ್ತಿಸಿದ, ಪುಟ್ಟ ಮುಖಂಡ ಟೋಪಿ ಯಾಡಿಸುತ್ತಾ!

ಕಾಶೀಯಿಂದ ಗಂಗೆ ತಂದು "ನಿಮ್ಮ ಗಂಟಲಿಗೆ ಹಾಕಿ, ಇದಕ್ಕೆ ಸುಖ ಕೊಡ್ತೀವಿ ಪರಕ್ಕೆ ಗತಿ ಕಾಣಿಸ್ತೀವಿ" ಅಂತ ಜನಕ್ಕೆ ಹೇಳಿ ಅವರ ಕಿಸೇಗೆ ಕಾಣದ ಹಾಗೆ ಕೈ ಹಾಕಿ, ತಾನು ಕಾಶೀ ಯಾತ್ರೆ ಮಾಡಬೇಕಯ್ಯಾ! ತನ್ನ ಪಿತೃಗಳಿಗೆ ಗತಿ ಕಾಣಿಸಬೇಕಯ್ಯಾ! ಹಾಗೇ ಅಮೆರಿಕಾ ಇಂಗ್ಲೆಂಡುಗಳಿಗೂ ಹೋಗಿ ಬರಬೇಕಯ್ಯಾ! ಅಂತಂದ ಹಿರಿಯ ಮುಖಂಡನೊಬ್ಬ.

ನನ್ನ! ಶಾಂತಿ ಸ್ವರೂಪಿಯಾದ ನನ್ನನ್ನೇ ಕೋಪಿಷ್ಟ ಅಂತಾನಲ್ಲಾ! ಇವನ ಬಾಯಿಗೆ ಹುಳು ಬೀಳಲಿ ಅಂತ ನಾನು ಅಂದರೆ ತಪ್ಪೇ! ಇವನ ನಾಲಿಗೆ ಸೇದಿಹೋಗಲಿ, ಇವನ ಹಲ್ಲು ಮುರಿದು ಹೋಗಲಿ! ಇವನ ಮನೆಗಾಯ ವಾಗಲಿ ಅಂತ ರೇಗಾಡಿದನಂತೆ ಒಬ್ಬ ಹಿರಿಯಾತ.

ಹಾಗೇ ಇವರೆಲ್ಲರೂ ಕೋಮುವಾರು ಭಾವನೆಯವರು. ಅದಕ್ಕೆ ಹೀಗೆ ಮಾಡ್ತಾರೆ. ನನಗದು ಇಲ್ಲವೇ ಇಲ್ಲ ಎಂದನಂತೆ ಹಿರಿಯಾತ.

* * *

ಇವರೆಲ್ಲರೂ ಈಗ ಒಕ್ಕೊರಲಿನಲ್ಲಿ 'ನನಗೇ ಓಟು' ಕೊಡಿ 'ಸತ್ಯಮೇವ ಜಯತೆ' ಅಂತ ಕೂಗುತ್ತಾ ಇದ್ದಾರಂತೆ.

—ಪ್ರಸಾದ್.

# ಶಂಖರಯ್ಯನ ಕಾಗದ

---

ಮಾವ ಬೈರೇಗೌಡರಲ್ಲಿ, ಸೋದರಳಿಯ ಸಿದ್ದಯ್ಯನ ಶರಣಾರ್ತಿ. ಇಲ್ಲಿ ಎಲ್ಲರೂ ಚೆನ್ನಾಗಿದೀವಿ. ನೀವುಗಳೆಲ್ಲರೂ ಚೆನ್ನಾಗಿದೀರಿ ಅಂತ, ಚಿಕ್ಕಸಿದ್ದ ಮೊನ್ನೆ ಬಂದಾಗ ಹೇಳಿದ.

ಈಗ ಕಾಗದ ಬರೆಯುವ ಸಂಗತಿ ಏನಂದರೆ:—

ನೀವು ನಮ್ಮ ಸೂಪರೆಂಟ್‌ಗೆ ಶಿಫಾರ್ಸುಮಾಡಿ ಹಳ್ಳೀಲಿ ಕಾನ್ಸ್ಟೇಬಲ್ ಆಗಿದ್ದ ನನ್ನ ಇಲ್ಲಿಗೆ, ಖಜಾನೆಗೆ ದಫೇದಾರನನ್ನಾಗಿ ವರ್ಗಮಾಡಿಸಿದಿರಿ. ಸಂಬಳ ಹೆಚ್ಚು ಇನ್ನು ನಾಕು ಜನದ ಮೇಲೆ ಜಬರ್ದಸ್ತಿಮಾಡಬಹುದು ಅಂತ ಬಂದೆ. ಇಲ್ಲಿ ೭ ಜನ ನನ್ನ ಕೈಕೆಳಗೆ ಕೋವಿಹಿಡಿದು ಕಾದಿರ್ತಾರೆ. ಪರವಾಗಿಲ್ಲ ಅಂತ ಸಂತೋಷಪಡ್ತಾ ಇದ್ದೆ. ಬೆಳಿಗ್ಗೆ ರುಮಾಲು ಕಟ್ಟಿದಾಗ ಒಂದು ಪಕ್ಕಕ್ಕೆ ಇರುವ ದಫೇದಾರ ಪಟ್ಟೀನ ಕನ್ನಡೀಲಿ ನೋಡಿದಾದ ಮನಸ್ಸು ಬಲು ಖುಷಿಯಾಗ್ತಾ ಇತ್ತು. ನಿಮ್ಮ ಮಗಳೂ ಕೂಡಿ ಆದ ನೋಡಿ ಎಷ್ಟೋ ಬಾರಿ ಕಣ್ಣು ಚಿಮ್ಮಿಸಿದ್ದಳು. ಎಲ್ಲಾ ಪಸಂದಾಗೇ ಇತ್ತು. ಆದರೆ ಮೊನ್ನೆ ಒಂದು ಹಗರಣ ಆಯ್ತು. ಅದಕ್ಕೋಸ್ಕರವೇ ಈ ಕಾಗದ ಬರೇತಿದೀನಿ.

ಭಾನುವಾರ. ಖಜಾನೆ ಗಸ್ತು ಕಾಯ್ತಾ ಇದ್ದೆವು. ನಾನು ಹೊರಗಡೆ ಒಂದು ಸಂದೂಕದ ಮೇಲೆ ಕೂತಿದ್ದೆ ಖಾಸಿಂ ಸೆಂಟ್ರಿ ಡೂಟಿ ಮಾಡ್ತಾ ಇತ್ತಿಂದತ್ತ ಅತ್ತಿಂದಿತ್ತ ಸುತ್ತಾ ಇದ್ದ. ಚೆನ್ನ, ಬುಡಾನ್ ಮತ್ತು ಸಿಂಗ್ ಮೂರು ಜನ ದೊಡ್ಡಬಾಗಿಲ ತಾವ ಕಾಯ್ತಾ ಇದ್ದರು ರಂಗ, ಷರೀಫ್, ಸಾಬಿ, ಚಿಕ್ಕಬಾಗಿಲ ತಾವ ಪಹರೆ ಇದ್ದರು. ಎಲ್ಲಾರ ಕೈಲೂ ಕೋವಿ ಇತ್ತು, ಭರ್ಜಿ ಇತ್ತು. ಭಾನುವಾರ ಕಛೇರಿ ಇದ್ದಿಲ್ಲ. ಜನರ್‍ಯಾರೂ ಇತ್ತಿಲ್ಲ. ಅದಕ್ಕೋಸ್ಕರ ದೊಡ್ಡಬಾಗಿಲ ತಾವ ಇದ್ದೋರು ಚೌಕಾ ಭಾರ ಆಡ್ತಾಇದ್ದರು. ಚಿಕ್ಕಬಾಗಿಲ ತಾವ ಇದ್ದೋರು ಚುಕ್ಕೀ ಆಟ ಆಡ್ತಾ ಇದ್ದರು. ನಾನು ಹೊಗೆ ಸೊಪ್ಪು ಅಡಿಕೆ ಎಲೆ ಜಗೀತಾ ದೂರದಲ್ಲಿ ಸಂದೂಕದ ಮೇಲೆ ಕೂತಿದ್ದೆ.

ಈ ಖಜಾನೇಗೆ ಪಹರೆ ಎಲ್ಲಾ ಜರ್ಬಿಗೋಸ್ಕರ ಅಂತ ಚಿನ್ನ ಒಂದು ಸಾರಿ ಹೇಳಿದ್ದ. ಈ ಖಜಾನೆ ಕಟ್ಟಿದಾಗಿಂದ ಇಲ್ಲಿ ಒಂದು ಸಾರಿ ಕೂಡ ಕಳ್ಳ ತನ ಆಗಿಲ್ಲ ಅಂತ ಷರೀಫ್ ಸಾಬಿ ಅಂದಿದ್ದ. ಕಳ್ಳತನ ಆಗೋಕೆ ಇಲ್ಲೇನೈತೆ ಅಂತ ರಂಗ ಅಂದಿದ್ದ. ಆದರೂ ಖಜಾನೆ ಖಜಾನೆಯೇ! ಕಾಯಬೇಕಾದ್ದು ನ್ಯಾಯಾನೇ ಅಂತ ನಾನು ಅವರಿಗೆ ಹೇಳಿ, ಬೈಸಾರೆ ಎದ್ದು ಇಲ್ಲಿಗೆ ಬಂದ ಕ್ಷಣ ನಿಮ್ಮ ತುಪಾಕಿ ಸರಿಮಾಡಿಕೊಳ್ಳಿ. ಮದ್ದು ಚರೆ ತುಂಬಿಡಿ ಯಾವ ಚಣ ಯಾವ ಅದ್ಮಿ ಬತ್ತಾನೋ ಏನೇನು ಮಾಡ್ತಾನೋ ಎಲ್ಲಾದಕ್ಕೂ ಸರಿ ಇರಬೇಕು ನಾವು ಅಂತ ಹೇಳ್ತಾನೇ ಇದ್ದೆ. ಅವರೆಲ್ಲಾ ಹುಡುಗರು. "ತಾತ ಹೆದರ ಬೇಡ. ನಮಗೆ ತುಪಾಕಿ ಗುಂಡು ಮದ್ದು ರವೆ ಇಲ್ಲದೇ ಇದ್ದರೂ ಪರವಾಗಿಲ್ಲ! ಈ ಕ್ಷಾಮ ಕಾಲದಲ್ಲಿ ಹೊಟ್ಟೆಗಿಲ್ಲದ ಕಳ್ಳ ಯಾವೋನು ಬಂದರೂ ಕೈಲೇ ಅವನ್ನ ಹಿಸುಕಿ ಸಮ ಮಾಡ್ತೀವಿ. ಮಸಲಾ! ಖಜಾನೇಗೇ ನುಗ್ಗಿದ ಕಳ್ಳ ಅಂದರೂ ನಷ್ಟ ಏನೂ ನಮಗಾಗುಲ್ಲ. ಕಡೆಗೆ ನಷ್ಟ ಆದರೂ ನಮ್ಮ ಕೆಲಸ ಹೋದರೂ ........ಕ್ರಾಪ್ಸ್‌ನಲ್ಲಿ ಕೆಲಸ ಸಿಕ್ಕೇಸಿಗುತ್ತೆ" ಅಂತ ತಲೆಯೆಲ್ಲಾ ಮಾತಾಡಿದರು. ನಾನಂದೆ ತಾತ ಅಂತ ನನ್ನ ಅನ್ನಬೇಡಿ. ಮೂರು ತಿಂಗಳು ಮಗು ಮನೇಲಿದೆ, ಅದಕ್ಕೆ ಕೇಳಿಸಿದರೆ ಅದರ ಮನಸ್ಸಿಗೆ ದುಃಖ ಆಗ್ತೈತೆ. ದಿಟ! ನನಗೆ ಕೋವಿ ಹಿಡಿದು ಹೊಡೆಯೋ ಅಭ್ಯಾಸ ಇಲ್ಲ. ಆದರೂ ಅನ್ನ ಕೊಡೋ ಸರ್ಕಾರ. ಅವರು ಹೇಳಿದ್ದಾರೆ, ಖಜಾನೆ ಕಾಯಿ ಅಂತ. ನಾವು ಕಾಯಬೇಕು. ಖಜಾ ನೇಲಿ ಏನಿದೆ ಅಂತ ನೋಡೋಕೆಲಸ ನಮ್ಮದಲ್ಲ! ನಮ್ಮ ಕೆಲಸ ಕಾಯೋದು ಇಲ್ಲ ಸಾಯೋದು" ಅಂತ ಅವರಿಗೆ ಬುದ್ಧಿವಾದ ಹೇಳಿದೆ. ಎಳೇ ಹುಡುಗರು ಬೀಡಿ ಹೊಗೆ ನನ್ನ ಮುಖಕ್ಕೇ ತಿರುಗಿಸಿ ಊದಿ "ತಾತ! ತಾತ! ಗಾಬರಿ ಏಕೆ? ನಿಂಗೆ ಪಿಂಚಿಣಿ ಬರೋಗಂಟ ನಾವು ಹುಷಾರಾಗೇ ಇರ್ತೇವೆ. ನಿನ್ನ ಕೆಲಸ ಕಾಯ್ತೇವೆ ಅಂತ ಅಂದರು. ಈಕಡೆ ನಾನು ಮುಖ ತಿರುಗಿಸಿದಾಗ ಅವರು ಗಳಗಳ ಅಂತ ನೀರ ನೊರೆಯಾಗೋ ಹಾಗೇ ನಕ್ಕರು. ಎಳೇ ನಿಂಬೇ ಕಾಯಿಗಳು. ಇವರಿಗೆ ಬುದ್ಧಿ ಹೇಳೋರಿಗೆ ಬುದ್ಧಿ ಇಲ್ಲ! ಅಂತ ನಾನೂ ಸುಮ್ಮನಾದೆ.

ಅವತ್ತು ಭಾನುವಾರ. ನಾನೂ ಸಂದೂಕದ ಮೇಲೆ ಕೂತಿದ್ದೀನಿ. ಚಿನ್ನ ಅಯ್ಯಯ್ಯೋ! ಅಂತ ಬೇನೆ ಬಂದೋರ್ಹಾಗೆ ಕೂಗಿದ, ಬುಡಾನ್ ಸಾಬಿ. ಅಲ್ಲಾರೇ ಅಂತ ಬಡುಕೊಂಡ. ಸಿಂಗ್ ದೊಡ್ಡ ಬಾಗಿಲ ತಾವಿಂದ ನನ್ನ ಸಂದೂಕದ ಹತ್ತಿರಕ್ಕೆ ಒಂದೇ ಛಂಗಿನಲ್ಲಿ ಹಾರಿಬಂದ. ಅಲ್ಲಿಂದ ಇಲ್ಲಿಗೆ ಹದಿನಾರು ಅಡಿ ಆಗಬಹುದು. ಹದಿನಾರಡಿ ಹುಲಿಹಂಗೆ ಹಾರಿ ನನ್ನ ತಾವ ಬೆವರು ಸುರಿಸ್ತಾ ಬಂದು ನಿಂತು ನನ್ನ ತಬ್ಬಿಕೊಂಡ.

ಏನಲಾ ಆಯ್ತು ಅಂತ ಸುತ್ತಲೂ ನೋಡ್ತೀನಿ! ಖಜಾನೆ ಒಳಗಿಂದ ಆ ಬಾಗಿಲ ಸಂಡೀಲಿ ಒಂದು ಹಾವು ಬಂದು ಇವರು ಕೂತಿದ್ದರಲ್ಲಾ! ಅದರ ತಾವಾನೇ ಗೋಡೆ ಕಡೆಗೆ ಸರಿದುಹೋಗಿತ್ತು.

ನಾನು ಒಂದು ಕೂಗು ಹಾಕಿದೆ. ಬಂದೂಕ ಇದೆ. ಹೊಡೀರೊ ಅಂತ. ಆ ಹೊತ್ತಿಗೆ ಚಿನ್ನ ನನ್ನ ತಾವಕ್ಕೆ ಧಂಗಿಬಂದಿದ್ದ. ಬುಡಾನ್‌ಸಾಬಿ ಕೂಡ ಎಗರಿಬಂದಿದ್ದ. ದಫೇದಾರನ ಹುಕುಂ ಕೇಳಿ ಮೂವರೂ ಬಿವರಿನಿಂದ ಜಾರ್‍ತಾ ಇದ್ದ ಬಂದುಕಾನ ನನ್ನ ಅಂಗೀಗೇ ವರಸಿ, ಹಾವಿನ ತಲೇ ಕಡೆ ಗುರಿ ಹಿಡಿದು, ಕವಾತ್‌ನಲ್ಲಿ ನಿಲ್ಲೋಹಾಗೆ ನಿಂತರು. ಅದನ್ನ ನೋಡಿ ನಾನು ಇನ್ನೊಂದು ಬಾರಿ ಹೊಡೀರಿ ಎಂತ ಕೂಗಿದೆ. ಆ ಕೂಗಿಗೆ ರಂಗ, ಷರೀಫ್ ಸಾಬಿ ಇಬ್ಬರೂ ಚಿಕ್ಕಬಾಗಿಲ ತಾವಿಂದ ಓಡಿಬಂದರು. ಈ ಮೂರು ಜನಾನ್ನೂ ನೋಡಿ ತಾವೂ ಸಾಲ್‌ಜೋಡಿನಿಂತರು. ಬಂದೂಕಾಗಳನ್ನ ಹಿಂದುಮುಂದಾಗಿ ಹಿಡಿದು ಅವರು ನಿಂತಹಾಗೇ ಇವರೂ ನಿಂತರು. "ಈಗ ಹೊಡಿ" ಅಂತ ನಾನು ಹುಕುಂ ಕೊಟ್ಟರೆ, ಇಬ್ಬರು ಅನ್ಯಾಯವಾಗಿ ಸಾಯ್ತಾರಲ್ಲಾ ಅಂತ ನಾನು ಅವರ ಹತ್ತಿರ ಹೋಗಿ, ರಂಗ, ಷರೀಫ್‌ಸಾಬಿ ಇಬ್ಬರ ಬಂದೂಕನ್ನೂ ಹಾವಿನ ಕಡೆಗೆ ತಿರುಗಿಸಿ ನಿಲ್ಲಿಸಿ, ಈ ಕಡೆ ಬಂದು, ಕಂಬದ ಹಿಂದೆ ನಿಂತು. ಹ್ಞೂ! ಹೊಡೀರಿ! ಅಂತ ಕೂಗಿದೆ. ಐದು ಜನ ಪಹರೆಯವರೂ! ಹರಹರ ಮಹಾದೇವ! ಅಲ್ಲಾ ಹೋ ಅಕ್ಬರ್ ಅಂತ ಕೂಗಿ ಬಂದೂಕಗಳನ್ನು ಹಾರಿಸಿ ದರು.

ಅವರು ಕೂಗಿದ್ದೇ ಶಬ್ದ. ಬಂದೂಕಿಂದ ಶಬ್ದವೇ ಬರಲಿಲ್ಲ. ಅವರ ಗಂಟಲಿಗೇ ಬೆದರಿ ಆ ಹಾವು ತಿರುಗಿ ಬಾಗಿಲ ಸಂದೀಯಿಂದ ಖಜಾನೆ ಒಳಕ್ಕೇ ಹೋಯಿತು. ಅದರ ಬಾಲ ಪೂರ್ತಿ ಒಳಕ್ಕೆ ಹೋದ ಮೇಲೆ ರಂಗ ಓಡಿ ಹೋಗಿ ಸ್ವಲ್ಪ ಮಣ್ಣು ತಂದು ಕೂಜಾದಲ್ಲಿದ್ದ ಕುಡಿಯೋ ನೀರಿನ ಜತೆಗೆ ಕಲಿಸಿ ಆ ಬಾಗಿಲ ಸಂದೀಗೆಲ್ಲಾ ಮಣ್ಣು ಮೆತ್ತಿಬಿಟ್ಟ. ತಿರುಗಿ ಹಾವು ಹೊರಕ್ಕೆ ಬರದೇ ಇರೋ ಹಾಗೆ. ಅವ ಬಲು ಧೈರ್ಯಶಾಲಿ!!

ಎಲ್ಲರೂ ಸ್ಥಿಮಿತಕ್ಕೆ ಬಂದ ಮೇಲೆ ನಾನು ಕೇಳಿದೆ ಎಲ್ಲರೂ ಬಂದೂಕನ್ನ ಹಾರಿಸಿದಿರಿ. ಒಂದೂ ಬಂದೂಕು ಕೂಡ ರವೆ ಹಾರಿಸಲಿಲ್ಲ. ಒಂದು ಏಟೂ ಆ ಹಾವಿಗೆ ತಗುಲಲಿಲ್ಲ. ಹೀಗೇನೇ ನೀವು ಬಂದೂಕನ್ನು ಜೋಪಾನವಾಗಿ ನೋಡಿಕೊಳ್ಳೋದು, ಖಜಾನೆ ಹಾವು ಬಂತು ಒಳಕ್ಕೇ ಹೋಯಿತು! ಪರ ವಾಗಿಲ್ಲ ಕಳ್ಳರು ಬಂದಿದ್ದರೆ ನಮ್ಮ ಗತಿ ಏನು? ಅಂತ ಎಲ್ಲರಿಗೂ ಬುದ್ಧಿವಾದ ಹೇಳಿದೆ.

ಬುಡಸ್ ಸಾಬಿ ಅಂದ 'ರಂಗ ಮಣ್ಣು ಮೆತ್ತಿದ್ದಾನೆ. ಈಗೇನೂ ಹೆದರ ಬೇಡಿ ತಾತ!' ಅಂತ. ಚೆನ್ನ ಅಂದ. 'ಅಲ್ಲಾ ತಾತ ನೀನ್ಯಾಕೆ ಗರುಡ ಮುಚ್ಚಿ ತೋರಿಸಲಿಲ್ಲ ಹಾವಿಗೆ' ಅಂತ ಗಡ್ಡದೊಳಗೇ ನಗ್ತಾ ನಗ್ತಾ ಸಿಂಗ್ ಕೂಡ ಅಂದು ಬಿಟ್ಟ 'ಅಲ್ಲಾ! ತಾತ ನಮ್ಮನ್ನು ಹೊಡೀ ಅಂತ ಹೇಳೋ ಬದಲು ಹಾವನೇ ಸಾಯಿ ಅಂತ ನೀನು ಹುಕುಂ ಕೂಗಿದ್ದರೆ. ಆ ಗಂಟಲಿಗೇ ಹೆದರಿ ಹಾವೂ ಸತ್ತುಹೋಗ್ತಾ ಇತ್ತು. ಆ ಗಂಟಲು ಧ್ವನಿ ನಮ್ಮ ಬಂದೂಕಕ್ಕೆ ತಾಗಿ ಮದ್ದೆಲ್ಲಾ ಸುಸ್ತಾಗಿ ರವೆ ಎಲ್ಲಾ ಷಂಡವಾಯ್ತು' ಅಂತ

ಮಾವಯ್ಯಾ! ಈ ಕೆಲಸದಲ್ಲೇ ನಾನಿದ್ದರೆ ಒಂದಿನ ಅಲ್ಲಾ ಒಂದಿನ ಈ ಹುಡುಗರು ನನ್ನ ಕೆಲಸಕ್ಕೇ ಸಂಚಕಾರ ತರ್ತಾರೆ. ಬೇಗ, ನೀವು ನಮ್ಮ ಸಾಹೇಬರಿಗೆ ಹೇಳಿ ನನ್ನ ನಮ್ಮೂರಿನ ಕಾನಿಸ್ಟೇಬಲ್ಲಾಗೇ ವರ್ಗಮಾಡಿಸಿದರೆ, ನಮ್ಮ ಅಪ್ಪ ಹಾಕಿದ ಆಲದ ತೋಟದಿಂದ, ನೀವು ಕೊಟ್ಟ ಪರಂಗಿ ತೋಪಿ ನಿಂದ, ನಿಮ್ಮ ಮಗಳನ್ನು ಸುಖವಾಗಿ ಸಾಕ್ತೇನೆ. ಇಲ್ಲದೇ ಹೋದರೆ, ಇಲ್ಲಿಯೇ ದಫೇದಾರನಾಗಿ ಉಳಿದರೆ, ಇದೇ ಹುಡುಗರು ಪಹರೆ, ಇದ್ದರೆ, ಇದೇ ರೀತಿ ಬಂದೂಕು ಹಿಡಿದರೆ, ನನಗೆ ಬರ್ತರ್ಫು ಖಂಡಿತ.

ಯೋಚನೆ ಮಾಡಿ ಬೇಗ ವರ್ಗಕ್ಕೆ ಪ್ರಯತ್ನಮಾಡಿ.

ನಿಮ್ಮ ಮಗಳೂ ನಾನೂ ಕೂಡ ಯೋಚ್ನೇ ಮಾಡೀ ಈ ಕಾಗದಾನ ಅವಳು ಹೇಳಿದ ಹಾಗೆ ನಾನು ಬರೆದಿದ್ದೇನೆ.

ಅತ್ತೆಯವರಿಗೆ ನನ್ನ ಶರಣಾರ್ತಿ ಹೇಳುವುದು.

ನಿಮ್ಮ ಅಳಿಯ,

ಸಿದ್ದಯ್ಯ.

ವಿ. ಸೂ. ನನ್ನ ಹೆಂಡರು ಕೂಡ ಈ ದಿನ ಅತ್ತೆಮ್ಮನವರಿಗೆ ಅಲಾಯಿದಾ ಒಂದು ದೊಡ್ಡ ಕಾಗದ ಬರೆದಿದ್ದಾರೆ. ನಿಮಗೆ ಮೊದಲೇ ತಿಳಿದಿರಲಿ ಅಂತ ಆ ಸಂಗತೀನೂ ಈಗಲೇ ನಾನು ನಿಮಗೆ ಬರೆದಿದ್ದೇನೆ.

—ಸಿ.



# ತೆರಿಗೆಗೆ ಆದಾಯ

(ದಾಶರಥಿ ದೀಕ್ಷಿತ್)

---

— ೧ —

ಬೆಂಗಳೂರು.

ತಾರೀಖು... .................

**ಆದಾಯತೆರಿಗೆ ಸಾಹೇಬರಿಗೆ:**

ರೇವಣ ಬಸಯ್ಯನ ಶರಣಾರ್ತಿಗಳು. ಮನಸ್ಸು ಬಹಳ ಕೆಟ್ಟಿದ್ದು. ಹುದುಗಿದ್ದ ಹಣ ಈಚೆ ಎಳೆಯಲು ಕೈ ಬಾರದು. ಮನಸ್ಸು ಬಿಡದು. ಬ್ರಿಟಿಷ್‌ನೋರಿದ್ದಾಗಲೇನೊ ಯಾವುದ್ರಿ ಕಳ್ಳಗಂಟು ಮಾಡಬೇಕಾದ್ದು ನಮ್ಮ ಧರ್ಮವಾಗಿತ್ತು. ಈಗ ನಮ್ಮನ್ನ ನಾವೇ ಆಳಿಕೊಳ್ಳುವ ಸುರಾಜ್ಯದಲ್ಲಿ ನ್ಯಾಯವಾಗಿ ಕೊಡಬೇಕಾದ ತೆರಿಗೆ ಕೊಡದೆ ಬಚ್ಚಿಡುವುದು ನಮ್ಮನ್ನು ನಾವೇ ಕೊಂದಂತಲ್ಲವೆ? ಆತ್ಮಹತ್ಯ ಪಿಶಾಚಿ ಜನ್ಮಕ್ಕೆ ದಾರಿ ಎಂಬುದನ್ನು ಮನಗಂಡ ನಾವು ಈ ರೀತಿ ಮಾಡುವುದು ಧರ್ಮ ಕರ್ಮಗಳ ದೃಷ್ಟಿಯಿಂದ ಮಾನ ಬರುವ ವಿಷಯವಲ್ಲ ಅಲ್ಲವೆ? ನನ್ನ ಮಿತ್ರರುಗಳಾದ ಸಾಹುಕಾರ್ ಮಕಮಲ್ ಟೋಪಿಚಂದ್, ಅಪ್ಪಟ ತುಪ್ಪದ ಗುಂಡಯ್ಯ, ನಾಮದುಂಡೆ ಕಂಪನಿ ಮಾಲೀಕರಾದ ತಿರುಪತಿನ್—ಇವರುಗಳು ಆತ್ಮ ಪರಿಶೋಧನಾರ್ಥವಾಗಿ ತಾವಾಗಿ ಹಣ ಸರ್ಕಾರಕ್ಕೆ ತೆರಿಗೆ ಒಪ್ಪಿಸಿದ್ದು ಕಂಡು ನನಗೂ ಹೊಟ್ಟೆ ತಳಮಳಿಸುತ್ತಿದೆ. ನನ್ನನ್ನು ನಾನೇ ಇರಿದುಕೊಳ್ಳಲಾರೆ. ದೇವರು ಮೆಚ್ಚುವ ಕೆಲಸ ಮಾಡಬೇಕಲ್ಲದೆ ಆತ್ಮವಂಚನೆ ಮಾಡಬಾರದು. ಹಣಕ್ಕೇನು ಎಷ್ಟಿದ್ದರೂ ಬೇಕು ನಾವು ಹೆಣವಾದ ಮೇಲೆ ಹಣಕ್ಕೆ ಕುಣಿಕೆ ಹಾಕಿ ಒಯ್ಯುತ್ತೇವೆಯೆ? ಮನಃಪೂರ್ವಕವಾಗಿ ನಾನು ಮಾಡಿದ ಕಾರ್ಯಕ್ಕೆ ಕಣ್ಣೀರಿಟ್ಟು ತೆರಿಗೆ ಕೊಡಲು ತಯಾರಿದ್ದೇನೆ. ವಿವರಗಳಿಗೆ ತಾವು ಎರಡು ಸಾಲು ಕಾಗದ ಬರೆದರೆ ತಿಳಿಸುತ್ತೇನೆ.

ಇತಿ ತಮ್ಮ,

ದೇಶಾಭಿಮಾನಿ,

ರೇವಣ ಬಸಯ್ಯ.

— ೨ —

ಆದಾಯ ತೆರಿಗೆ ಕಛೇರಿ
ಇಂಡಿಯಾ ಸರ್ಕಾರ

Ref........... ನಿಮ್ಮ ಕಾಗದ ತಾರೀಖು...........................

ನಮ್ಮ Ref........... ೧೯×/೧೨೦ ೧೯೫೧. A.X.B.

ಶ್ರೀಯುತ ರೇವಣಬಸಯ್ಯ ಇವರಿಗೆ —

**ಶ್ರೀಯುತರೆ:**

ಸರ್ಕಾರದವರು ಹುದುಗಿಟ್ಟ ಆಧಾಯ ತೆರಿಗೆ ಹೊರಬರಲು ಸಾಕಷ್ಟು ಅವಕಾಶ ಕೊಟ್ಟಿದ್ದಾರೆ. ಇನ್ನೂ ಕಾಲಾವಕಾಶವಿರುವುದರಿಂದ ತಮ್ಮ ಆತ್ಮ ಶುದ್ಧಿಗಾಗಿ ಎಲ್ಲಾ ಹಣ ಪಾವತಿಮಾಡುವಿರೆಂದು ತಿಳಿದಿದ್ದೇವೆ. ನಿಮ್ಮಂಥವರು ಮುಂದೆ ಬಂದಿರುವುದು ಇತರರಿಗೆ ಮಾರ್ಗದರ್ಶನ. ಈ ವಿಷಯದಲ್ಲಿ ತಮಗೆ ಏನು ಅನುಕೂಲ ಬೇಕಾದರೂ ಬರೆಯಿರಿ.

ಇತಿ ತಮ್ಮ,

ರುಜು...........................
ಆದಾಯ ತೆರಿಗೆ ಅಧಿಕಾರಿ.

— ೩ —

ಬೆಂಗಳೂರು

ತಾ||.........................

**ಆದಾಯ ತೆರಿಗೆ ಸಾಹೇಬರಿಗೆ:**

ರೇವಣ ಬಸಯ್ಯನ ಅನಂತಾನಂತ ಶರಣಾರ್ತಿಗಳು ನಿಮ್ಮ ಕಾಗದ ಕಂಡು ಬಹಳ ಸಂತೋಷವಾಯಿತು. (ಅಲಕ್‌ನಿರಂಜನ್ ತೈಲ ಸಮಸ್ತ ಸುಸ್ತುಗಳಿಗೂ ರಾಮಬಾಣ) ತಯಾರಿಸಿ ಮೊನ್ನೆ ತಾನೆ ಆತ್ಮಶುದ್ಧಿಗೆ ತಮಗೆ ಅರವತ್ತು ನೂರು ರೂಪಾಯಿ ಕಳಿಸಿ ಕೈಕೊಡವಿಕೊಂಡ ನಿರಂಜನ್ ಕುಮಾರರು ನಿಮ್ಮ ಕಾಗದ ಬಂದಾಗ ಇಲ್ಲೇ ಇದ್ದರು. ಈಗ ಹುಳು ಕೊರೆದಹಾಗೆ ಕೊರೆಯುತ್ತಿದ್ದ ಅವರ ಮನಸ್ಸು ಹಗುರಾಗಿರುವುದರಿಂದ ಅನ್ನ ಎರಡು ಹೊತ್ತೂ ಸೇರುತ್ತಿದೆ ಎಂದು ಹೇಳಿದರು.

ನಾನೂ ಎರಡು ಹೊತ್ತು ಊಟಮಾಡಬೇಕಾಗಿದೆ. ಅದಕ್ಕೆ ಆದಾಯ ತೆರಿಗೆ ತೆತ್ತುಬಿಡುವುದೇ ಉಪಾಯ. ಅದಕ್ಕೆ ಮಾರ್ಗ ತಾವು ತೋರಿಸಿಕೊಡ

ಬೇಕೆಂದು ನಾನು ಅನನ್ಯ ಭಕ್ತಿ ವಿಶ್ವಾಸಗಳಿಂದ ಬೇಡುತ್ತೇನೆ. ಆದಾಯ ತೆರಿಗೆ ತೆರಲೇಬೇಕು ಇಲ್ಲದಿದ್ದಲ್ಲಿ ನಾನು ಬದುಕಲಾರೆ. ನೀವು ಖಂಡಿತ ದಾರಿ ತೋರಿಸಿ ನನಗೆ ಎರಡು ಹೊತ್ತು ಊಟಾ ದಯಪಾಲಿಸಬೇಕು. ನನ್ನ ಜೀವ ನನ್ನ ಮನಸ್ಸು ನಿಮ್ಮ ಕೈಲೇ ಇದೆ. ಇನ್ನೂ ಸುತ್ತು ಬಳಸುದಾರಿ ಬೇಡ, ನೇರವಾಗಿ ನನ್ನ ಮನಸ್ಸು ಬಿಚ್ಚಿ ಹೇಳಿಬಿಡುತ್ತೇನೆ. ಸ್ವಾಮೀ....ತೆರಿಗೆ ಕೊಡಲು ತಯಾರಿರುವ ನನಗೆ ಆದಾಯ ಬರಲು ಮಾರ್ಗ ಕಲ್ಪಿಸಿ ಕೊಡಬೇಕಾದವರು ನೀವಲ್ಲವೆ? ನಮ್ಮಂಥ ಸತ್ಪ್ರಜೆಗಳು ಸರಿಯಾಗಿ ತೆರಿಗೆ ಕೊಡಲು ಆದಾಯ ಇಲ್ಲದಿದ್ದರೆ ಹೇಗೆ? ಅನೇಕರಿಗೆ ಆದಾಯವಿಲ್ಲದಿರುವುದೇ ಸರ್ಕಾರಕ್ಕೆ ತೆರಿಗೆ ಬರದೆ ಲುಕ್ಸಾನು ಆಗುತ್ತಿದೆ. ಆದ್ದರಿಂದ ಈ ಕೂಡಲೇ ನನಗೆ ಆದಾಯ ಗಳಿಸುವ ಮಾರ್ಗ ತೋರಿಸಿ, ತೆರಿಗೆ ಕೊಡಲು ಅವಕಾಶ ಕಲ್ಪಿಸಿಕೊಡುವಿರೆಂದು ತಿಳಿದಿದ್ದೇನೆ. ವೃಥಾ ಅಲಕ್ಷ್ಯ ಮಾಡಿ ಸರ್ಕಾರಕ್ಕೆ ನಷ್ಟಮಾಡುವವರು ನೀವಲ್ಲವೆಂದು ನಂಬಿರುವ, ನಿಮ್ಮ ಉತ್ತರ ಕಾಯುತ್ತಿರುವ,

ರೇವಣ ಬಸವಯ್ಯ.

---



ಇಂಗ್ಲೆಂಡಿನಲ್ಲಿ ಸಂತೆ ಅಂತ ನಮ್ಮವ ಹೋದಾಗ,
ಅಲ್ಲಿ ಊಟಕ್ಕೆ ಅಂತ ಹೋಟಲಿಗೆ ಹೋದಾಗ,
ತಟ್ಟೇಲಿರೋ ತಿಂಡಿ ತಿನ್ನುಕ್ಕೆ ತಲೇಲಿರೋ ಚಮಚ ಕೇಳ್ದಾ ಅಂತ ಅವನೇ ಬರೆದ.

# ಒಲ್ಲೆನೆ ಸಾಹಿತಿ ಗಂಡನ್ನ

ಒಲ್ಲೆನೆ ಸಾಹಿತಿ ಗಂಡನ್ನ || ನಾ ||
ಒಲ್ಲೆನೆ ಸಾಹಿತಿ ಗಂಡನ್ನ ||

ಹೊಟ್ಟೆಯ ಅರಿವಿಲ್ಲ ಬಟ್ಟೆಯ ಖಬರಿಲ್ಲ || ಒಲ್ಲೆನೆ ||

ಹೊತ್ತಾರೆದ್ದು ಹೊತ್ತಿಗೆ ಹಿಡಕೊಂಡು
ಮತ್ತ ತುಂಬಿಯ ಹಾಗೆ ಗುಂಯ್‌ಗುಡುತ
ಸುತ್ತಲಿದ್ದವರನ್ನು ಕತ್ತೆತ್ತಿ ನೋಡದ
ಎತ್ತೋ ಲಕ್ಷವ ಹಾಕುವ ಗಂಡನ್ನ || ಒಲ್ಲೆನೆ || ೧

ಜಿಲೆಯಿಂದ ಕೃತಿಗಳ ಬಿಡದೆ ನಿರ್ಮಿಸುತಲಿ
ನಾಳಿನ ಕೀರ್ತಿಗೆ ಕೈಯೊಡ್ಡುತ
ಬಡತನ ಬವಣೆಯು ಜ್ಞಾನಸಾಧನವೆಂದು
ಸಂತತ ಸಂಕಟ ಪಡುತಿಹ ಗಂಡನ್ನ || ಒಲ್ಲೆನೆ || ೨

ಪತಿಯೆಂದು ನಂಬಿದರೆ ಪತಿತೋದ್ಧಾರಕನಾಗಿ
ಜನ—ದೇಶ ಸೇವೆಯೆಂದಲೆಯುತಲಿ
ಸತಿಗೆ ಸಂಸಾರದ ಸಾಮ್ರಾಜ್ಯ ಗುಡಿಗಟ್ಟಿ
ನುಣ್ಣನೆ ಜಾರುವ ಸಾಹಿತಿ ಗಂಡನ್ನ || ಒಲ್ಲೆನೆ || ೩

—ನಿರಂಗ.

---



# ಆಗ—ಈಗ

—

### ( ೧೯೩೧ ರಲ್ಲಿ )

"ಮಂತ್ರಿಗಳು ಬರ್ತಾರಂತೆ, ಸ್ಕೂಲಿಗೆ, ಸೋಮವಾರ!"....ಆ ?....ಮಂತ್ರಿಗಳೇ?...."ಊ!....ಮಂತ್ರಿಗಳೂ!...."

ಬಾಲಕಿಯರ ಪಾಠಶಾಲೆ ಕಟ್ಟಡ ಸಹಿತ ಥರಥರ ನಡುಗಿತು. ಹೆಡ್ಮೇಡಮ್ ಹಾರ್ಟು ಹೊಡೆಯತೊಡಗಿತು. ಹುಡುಗೀರು ಗಡಗುಟ್ಟಿದರು!

ಮಾರನೇ ದಿನದಿಂದ ಪಾಠ ಪ್ರವಚನಕ್ಕೆ ಪೂರ್ಣವಿರಾಮ ದೊರೆಯಿತು. ಸ್ವಾಗತ ಏರ್ಪಾಡಿಗೆ ಸಕಲವೂ ಸಿದ್ಧವಾಗತೊಡಗಿತು. ಮದುವೇ ಮನೆ ಸಡಗರದಂತಿತ್ತು ಎಲ್ಲೆಡೆಯಲ್ಲೂ.

ಇಂಗ್ಲಿಷ್ ಮೇಡಮ್ಮ ಅಣಿಯಾಗಿ ಆರು ಎಕ್ಸರ್ಸೈಜು ಪುಸ್ತಕಗಳಲ್ಲಿ (ಅಲ್ಪಸ್ವಲ್ಪ ವ್ಯತ್ಯಾಸದೊಡನೆ) ಬರವಣಿಗೆ ಬರೆದು ಕೆಳಗೆ ಆರು ಹುಡುಗಿಯರ ಕೈಯಿಂದ ಹೆಸರು ಕೊರೆಸಿದರು. ಭೂವಿವರಣೇ ಮೇಷ್ಟ್ರು ಗಜ ಚದರದ ಹನ್ನೆರಡು ಭೂಪಟಗಳನ್ನು ಅಂದವಾಗಿ ರಚಿಸಿ, ಬಣ್ಣ ಬಳಿದು, ನೆರೆನಾಡಿನ ನದಿ ಬೆಟ್ಟಗಳು, ಹೊರ ಊರಿನ ಹವಾಮಾನ, ಬೇಡದ ದೇಶದ ಬೆಳೆ, ನೋಡಿದ ನಾಡಿನ ಪಟ್ಟಣಗಳು ಇತ್ಯಾದಿ ಇತ್ಯಾದಿ ಕ್ರಮವಾಗಿ ಗುರ್ತಿಸಿ, ಯಥಾರೀತಿ ಹನ್ನೆರಡು ಹುಡುಗಿಯರ ಹೆಸರುಗಳನ್ನು ಲಗತ್ತಿಸಿ, ಗೋಡೆಗೆ ನೇತುಹಾಕಿದರು. ಡ್ರಾಯಿಂಗ್ ಮೇಷ್ಟ್ರು ತಮಗೆ ತಿಳಿದ ಚಿತ್ರಕಲೆಯನ್ನೆಲ್ಲ ಬಾಲಕಿಯರ ಪರವಾಗಿ ಪ್ರಯೋಗಿಸಿದರು. ಪದ್ಯಪಠನ, ಪದ್ಯಕಥನ, ನೀತಿಭೋದೆ, ಸಮಸ್ತವೂ ಮಂತ್ರಿಗಳೆದುರು ಪ್ರದರ್ಶನಕ್ಕೆ ತಯಾರಾದುವು. ಸಂಗೀತದ ಮೇಡಂಗಂತೂ ಪುರುಸತ್ತೇ ಇಲ್ಲ. ಮಂತ್ರಿಗಳ ಹೆಸರು ಸೇರಿಸಿ, ಸ್ವಾಗತದ ಹಾಡು ಕಟ್ಟಿ, ಎಂಟು ಹುಡುಗಿಯರನ್ನು ಹಾಡಲು ತಯಾರಿಸುವುದೇನು ಸುಲಭದ ಮಾತೇ! ಹುಡುಗಿಯರೋ—ಅರಚೀ ಅರಚೀ ಅಂದಿನ— ಆ ಮುಖ್ಯದಿನದ—ಹೊತ್ತಿಗೆ ಗಂಟಲು ಮುಕ್ಕಾಲುಪಾಲು ಕೂತುಹೋಗಿತ್ತು!

ಆ ದಿನ, ಸುದಿನ, ಬಂತು. ಶಾಲೆಯು ಸುಣ್ಣ ಕಾರಣೆ ತೋರಣಗಳಿಂದ ಕಂಗೊಳಿಸುತ್ತಿತ್ತು. ಬಾಲಕಿಯರೆಲ್ಲ ಅವರ ಅಮ್ಮನದೋ ಅಜ್ಜಿಯದೋ ಮದು

ವೆಯ ಸೆರಗು ತುಂಬ ಜರಿಯ ಸೀರೆ ಉಟ್ಟು, ತಲೆ ತುಂಬ ಹೂ ಮುಡಿದು, ಮೈ ತುಂಬ ಮನೆಯವರೆಲ್ಲರ ಒಡವೆ ಧರಿಸಿ, ಸಾಲು ಸಾಲಾಗಿ ನಿಂತರು. ದಿರಸು ಧರಿಸಿದ ಸ್ಕೂಲ್ ಜವಾನ, ಬೆವರೊರೆಸುತ್ತಿದ್ದ ಮೇಡಂ ಮೇಷ್ಟ್ರುಗಳು ಮುಂದೆ ಸ್ವಾಗತಿಸಿದರು.

ಮಂತ್ರಿಗಳು ಬಾಲಕಿಯರ ಅತ್ಯುತ್ತಮ ಬರಹ, ಕೈ ಕೆಲಸ, ಚಿತ್ರಕಲೆ, ಭೂಪಟ ರಚನೆ, ಇತ್ಯಾದಿ ನೋಡಿ ಬೆರಗಾದರು. ಶಾಲೆಯ ಉತ್ತಮ ಪರಿಸ್ಥಿತಿಯನ್ನು ಮೆಚ್ಚಿದರು. ಹುಡುಗಿಯರು,

"ಸ್ವಾಗತ ಮಾತ್ಯಾವರಾ....ಆಆಆ....ಸ್ವಾಗತ ಮಾತ್ಯವರಾ।
ನತಜನೋದ್ಧಾರಾ, ಸ್ಮಿತಮನೋಹರಾ।
ಮಾರಾ, ಸುಕುಮಾರಾ...........॥"

ಇತ್ಯಾದಿ ಹಾಡಿದಮೇಲಂತೂ ತಮ್ಮ ಮೈ ಮುಖವನ್ನೇ ನೋಡಿಕೊಳ್ಳುತ್ತಿದ್ದರು ಕಾರಿನಲ್ಲಿನಲ್ಲಿ ಕೂರುವವರೆಗೂ— ತಾವೇ ಹೌದೇ ಎಂದು!

*　　*　　*

(೧೯೫೧ ರಲ್ಲಿ)

"ಮಂತ್ರಿಗಳು ಬರ್ತಾರಂತೆ.......ಮಂತ್ರಿಗಳು........ಸ್ಕೂಲು ನೋಡುಕ್ಕೆ, ಸೋಮವಾರ!....ಆ....ಹೂಂ!....ಮಿನಿಸ್ಟ್ರು....ಮಂತ್ರಿಗಳೊ ..."

"ಸೋ....ರಿ" ರಾಗ ಎಳೆದಳು ಹೆಡ್ಮೇಡಮ್ಮ. ಹುಬ್ಬುಗಂಟಿಕ್ಕಿದರು ಮೇಷ್ಟ್ರು, ಮೂತಿ ಸೊಟ್ಟಗೆ ಮಾಡಿದರು ಮೇಡಂಗಳು.

ಮಂತ್ರಿಗಳು ಬಂದರು. "ಆಯಪ್ಪ ನನ್ನಂಗೇ ಕೋರೀ ರುಮಾಲು ಸುತ್ತಿದ್ದೋನಲ್ವಾ, ನಾಕಾಣ್ಣಾ?... ಏನೋ ಈಗ.. ನಶೀಬು .. ಎಂದು ತಿರಸ್ಕಾರದ ಮೊಗದಿಂದ ಸ್ಕೂಲ್ ಜವಾನ ನಾರಾಯಣಿ ನೇತುಹಾಕಿದ್ದ ನಾಲ್ಕು ಮಾವಿನೆಲೆ ಮಂತ್ರಿಗಳ ತಲೆಗೇ ಬಡಿಯಿತು. "ದುರ್ಭಿಕ್ಷದಲ್ಲಿ ಡಬ್ಬಲ್ ಮಕ್ಳು" ಅನ್ನೋ ಹಾಗೆ, ಅರೆ ಹೊಟ್ಟೆ ತಿಂದು ಬಂದು ಆಫೀಸ್ರೂಮಿನ ಮೇಜಿನ ಮೇಲಾದರೂ ಮಲಗಿ ಹಾಯಾಗಿ ನಿದ್ದೆ ಹೊಡೆಯೋಣ ಅಂದರೆ ಇವರ ಕಾಟ ಬೇರೆ!" ಅಂತ ಮನಸ್ಸಿನಲ್ಲೇ ಬಯ್ದುಕೊಳ್ಳುತ್ತಾ ದೇಶಾವಾರದ ನಗೆಯಿಂದ ಸ್ವಾಗತಿಸಿದಳು ಹೆಡ್ಮೇಡಮ್ಮ. ಮಿಕ್ಕ ಮೇಷ್ಟ್ರು ಮೇಡಮ್ಮಗಳೂ ಡಿಟೋ.

ಮಂತ್ರಿಗಳ ಭೇಟಿ, ಹೇಗಿದ್ರೂ ಹಾಲಿಡೇ ಅಂತ ಖುಷೀಲಿ "ಕಾಳೀ ಘಟಾ" ನೋಡುತ್ತಿತ್ತು ವಿದ್ಯಾರ್ಥಿನಿಯರದೊಂದು ಗುಂಪು. ಮತ್ತೊಂದು

ಗುಂಪು ಕಬ್ಬನ್ ಬನದ ರೆಸ್ಟ್ರಾಂಟಿನ ಪಡಿ ಜಾಮೂನು ಸವಿಯುತ್ತಿತ್ತು. ಅಳಿದುಳಿದ ಆರೆಂಟು ಬಾಲಕಿಯರು ಅರೆ ಮನಸ್ಸಿನಿಂದ ಎದ್ದು ನಿಂತರು.

ಮಂತ್ರಿಗಳು ಶಾಲಾ ಪರೀಕ್ಷೆ ನಡೆಸಿದರು ಭೂವಿವರಣೇ ಮೇಷ್ಟ್ರು ಭೂಪಟವೇ ಸಪ್ಲೈ ಆಗಿಲ್ಲ ಅಂದರು. ಗಣಿತದ ಮೇಡಂ, "ಕಲಿಸಿರುವುದು ರೇಷನ್ ಲೆಖ್ಖ, ರೊಟ್ಟೀ ಸಂಕಲನ, ಕಲ್ಲು ವ್ಯವಕಲನ ಇಷ್ಟೇ" ಎಂದಳು. ವಿದ್ಯಾರ್ಥಿನಿಯರು "ನಮಗೆ 'ಗೃಹಕಾರ್ಯ' ಬೇಕಿಲ್ಲ, 'ಆರೋಗ್ಯನಿಯಮ' ಮೊದಲೇ ಬೇಕಿಲ್ಲ. ಸಿನಿಮಾ ತಾರೆಯರ ಜೀವನ ಚರಿತ್ರೆ, ಕಾಸ್ಮೆಟಿಕ್ಸ್ ಪ್ರಯೋಗ ಇತ್ಯಾದಿ ಸಬ್ಜೆಕ್ಟ್ಸ್ ಇಂಟ್ರಡ್ಯೂಸ್ ಮಾಡಿಸಬೇಕು" ಎಂದರು.

ಸಂಗೀತ ಮೇಡಂ ಸರದಿ ಬಂತು ಒಂದು ಹಾಡು ಹೇಳಿಸಿ ಹುಡುಗಿಯರಿಂದ ಅಂದರು ಮಂತ್ರಿಗಳು. ಫಿಲ್ಮ್‌ಹಿಟ್ಸ್ ಪ್ರವೀಣೆಯೊಬ್ಬಳು,

ಏ ಕೋನ ಆಯಾರೇ ಮೋರೆ ಅಂಗನಮೇ
ಆಜ್
ಏ ಕೋನ ಸೈತಾನರೇ ದುಶ್ಮನ್‌ರೇ ಮೋರೆ ಅಂಗನಮೇ"

ಎಂದು ಹಾಡಲು ಪ್ರಾರಂಭಿಸಿದೊಡನೆಯೇ ಮಂತ್ರಿಗಳು ಒಂದೇ ಉಸುರಿಗೆ ಹಾರಿ ಕಾರಲ್ಲಿ ದೌಡಾಯಿಸಿದರು!

—ಸುನಂದಮ್ಮ.

---



ಕಣ್ಣಿಲ್ಲದಾ ಕಪೋತ ಶಿವಾ!

# ಐಬಿಲ್ಲದ ಟರ್ಮ್

---

ಆಕೆ :— ಬಣ್ಣದ ಮಾತಿಗೆ ಬರಗಾಲ್ವಿಲ್ಲ
ಮಂಕ್ ಹಿಡಿಸೋಕೆ ಮೀಸೆ ಇಲ್ಲ—
ಇಳೀರಂತಂದ್ರೆ ನೀವೂ ನಾವೂ
ವೋಟಿನ್ ಬೇಟೀಗೆ—
ಏನೇ ಇರಲಿ ನನ್ ವೋಟನಕ
ನಿಮ್ದೊಂದು ಪೆಟ್ಗೇಗೆ!

ಆತ :—ಬಣ್ಣದ್ ಮಾತೂ ಬೇಕಾಗಿಲ್ಲ
ಮಂಕ್ ಹಿಡಿಸೋದೂ ಬೇಕಾಗಿಲ್ಲ
ಅಂದೇ ನಾನು ನಿನ್ ವೋಟನ್ನ
ಪಡೆದಿದ್ದಿಲ್ವೇನೆ?
ನಮ್ ರಾಜ್ಯಕ್ಕೆ ಈ ನಮ್ 'ಟರ್ಂ'ಗೆ
ಐಬಿಲ್ಲಾಂತೇನೆ!

—ಸರೋಜಿನಿ ಆರೂರ್.

---




ನೀನು ನಿಧಾನವಾಗಿ ಬಾ, ರಸೆಲ್‌ಮಾರ್ಕೆಟ್‌ನ ಹತ್ತಿರ ಕಾದುಕೊಂಡಿರುತ್ತೇನೆ.

# ಚುನಾವಣಾ ಪ್ರಚಾರ

— ೧ —

ರೈತರೇ, ನಾಡಿನ ಬೆನ್ನು ಮೂಳೆಗಳೇ, ನಿಮಗೆ ಬೇಕಾದುದೇನು? ಒಂದು ಜೊತೆ ಎತ್ತು. ಅವು ಇದ್ದರೆ ಮಣ್ಣನ್ನು ಹೊನ್ನು ಮಾಡುವಿರಿ. ಎತ್ತುಗಳಿಲ್ಲದೆ ಹೊಲ ಉಳಲು ಸಾಧ್ಯವೆ? ಅನ್ನ ಬೆಳೆಯಲು ಸಾಧ್ಯವೆ? ಆದ್ದರಿಂದ ಎತ್ತುಗಳನ್ನು ಕೈಬಿಡಬೇಡಿ. ದನವೆಂದು ತೆಗಳಬೇಡಿ. ದನವೇ "ಧನ". ದನವನ್ನು ಮರೆತರೆ ದೇಶಕ್ಕೆ ಆಪತ್ತು. ದನವೇ ನಮ್ಮ ಗುರುತು. ದನಕ್ಕೇ ನಿಮ್ಮ ಓಟನ್ನು ಹಾಕಿರಿ. ಬಸವನಿಗೆ ದ್ರೋಹ ಬಗೆದರೆ ನೀವು ನಾಶವಾಗುವಿರಿ. ದನ ದನ ದನವೇ ನಿಮ್ಮ ಗುರಿಯಾಗಿರಲಿ !!

— ೨ —

"ಮರನೆಟ್ಟು—ಬರ ಅಟ್ಟು" ಎಂದು ಸರ್ಕಾರದವರೇ ಬಡುಕೊಂಡರು. "ವನಮಹೋತ್ಸವ" ಎಂದರು. ಆದರೆ ಈಗ ಅವರ ಗುಟ್ಟು ಹೊರಬಿತ್ತಲ್ಲ! ಮರವನ್ನು ಕೈಬಿಟ್ಟರು. ಆದರೆ ನಾವು ಮರವನ್ನೇ ಹಿಡಿದೆವು. ಮರ—ಮರವೇ ನಮ್ಮ ಮಂತ್ರ. ಮರವೇ ದೇಶದ ಆಧಾರ. ಮನೆಗೂ ಆಧಾರ. ಮರದಿಂದಲೇ ಮೋಕ್ಷ. ಮರವನ್ನು ಕೈಬಿಡಬೇಡಿ. ನಿಮ್ಮ ಓಟು "ಮರಕ್ಕೆ ಇರಲಿ. ಮರದ ಡಬ್ಬಕ್ಕೆ ಹಾಕಿರಿ !!

— ೩ —

ಮನೆಯಿಲ್ಲದೆ ಬದುಕುವುದು ಸಾಧ್ಯವೆ? "ಬೆಚ್ಚನಾ ಮನೆಯಾಗೆ........" ಮುಂತಾಗಿ ಸರ್ವಜ್ಞ ಹೇಳಿರುವುದು ನಿಮಗೆ ತಿಳಿದಿದೆ. ಅಂಥ ಮನೆಯೇ ನಮ್ಮ ಗುರುತು. ಬೇರೆಯವರನ್ನು ನೆಚ್ಚಿದರೆ ನಿಮಗೆ ನಾಯಿಪಾಡೇ ಸರಿ. "ದನ"ದಂತೆ ಕುತ್ತಿಗೆಯ ಮೇಲೆ ನೊಗ ಹೇರಿ ದುಡಿಸುತ್ತಾರೆ. ಮರದ ಕೆಳಗೆ ವಾಸಮಾಡುವಂತೆ ಮಾಡುತ್ತಾರೆ. ನಾವಾದರೂ ಬೆಚ್ಚನೆಯ ಮನೆಯನ್ನು ತೋರಿಸುತ್ತಿದ್ದೇವೆ. ಮನೆಯೇ ಸ್ವರ್ಗ! ಮನೆಯನ್ನು ಕೈಬಿಡಬೇಡಿ. ನಿಮ್ಮ ಹೆಂಡತಿ ಮಕ್ಕಳೆಲ್ಲ ಇರುವುದು ಎಲ್ಲಿ? ಮನೆಯಲ್ಲಿ ತಾನೇ? ಅಂಥ ಮನೆಯನ್ನು ಕೈಬಿಡಬೇಡಿ. ಮನೆಗೆ "ಓಟು" ಕೊಡಿರಿ. ಮನೆಯ ಡಬ್ಬದಲ್ಲಿ ಹಾಕಿರಿ !!

— ೪ —

ಬೆಳಕು–ಜ್ಯೋತಿ ಎಂದರೆ ದೇವರೆಂದೇ ಅರ್ಥ. ಜೀವ–ಆತ್ಮ ಇವೆಲ್ಲಾ ದೀಪಕ್ಕೆ ಸಮಾನ. ಅದೇ ನಮ್ಮ ಗುರುತು. ಅದನ್ನು ಬಿಟ್ಟು ಮನೆ–ಮಠ–ದನಕರುಗಳು ಇವುಗಳಿಗೆ ನಮ್ಮನ್ನು ಹೋಲಿಸುವುದೇ? ಇವೆಲ್ಲಾ ನಶ್ವರ! ಅವರ ಮಾತಿಗೆ ಮರುಳಾಗದಿರಿ. ಜ್ಯೋತಿಗೆ ಶರಣೆನ್ನಿರಿ. ನಿಮ್ಮ ಓಟನ್ನು ದೀಪಕ್ಕೆ ಹಾಕಿರಿ.

— ೫ —

"ಪೈರು–ಕುಡುಗೋಲು" ಇದೇ ನಮ್ಮ ಆಧಾರ. ಇದು ಬಿಟ್ಟರೆ ನೀವು ಮಣ್ಣು ತಿಂದಹಾಗೇ ಸರಿ. ಕಾಣುವ ಪೈರನ್ನು ಬಿಟ್ಟು ಖಾಲಿ ಮನೆಯಲ್ಲಾಗಲೀ, ಮರದ ಕೆಳಗಾಗಲೀ ನಿಂತರೆ ಹೊಟ್ಟೆ ತುಂಬುವುದೇ? ನಮಗೆ ಇಂದು ಬೇಕಾಗಿರುವುದು ಅನ್ನ. ಅದೇ ನಮ್ಮ ಗುರುತು. ಪೈರು—ಅದನ್ನು ಕುಯ್ದು ಹದಮಾಡಲು ಕುಡುಗೋಲು. ಇದೇ ನಿಮ್ಮ ಮಂತ್ರವಾಗಿರಲಿ. ಓಟಿನ ಚೀಟಿಯನ್ನು ಕುಡುಗೋಲಿಗೆ ಕೊಡಿ.

— ೬ —

"ಗಣಪತಿ"—ಪ್ರಾರಂಭದಲ್ಲಿ ಪೂಜಿಸಬೇಕು. ಇಲ್ಲದಿದ್ದರೆ ನಿಮ್ಮ ಎಲ್ಲ ಕಾರ್ಯಕ್ಕೂ ವಿಘ್ನವೇ ಸರಿ. ವಿಘ್ನೇಶ್ವರನನ್ನು ನಂಬದಿದ್ದರೆ ನಿಮ್ಮ ಮಾತನ್ನು ಒಂದು ಇಲಿಯೂ ಕೇಳುವುದಿಲ್ಲ. ನಮ್ಮ ಧರ್ಮ ಆಚಾರ ಬಿಡಲಾಗುತ್ತದೆಯೆ? ಖಂಡಿತ ಇಲ್ಲ. ಮೊದಲಿನ ಓಟು "ಗಣೇಶ"ನಿಗೇ ಸರಿ. ಗಣೇಶನಿಗೆ ಗೌರವ ಕೊಡಿ. ಓಟು ಕೊಡಿ. ಅವನು ನಿಮಗೆ "ಕಡುಬು" ಕೊಡುತ್ತಾನೆ.

ಗಣೇಶ ಎಂದರೆ ಸಾಮಾನ್ಯನಲ್ಲ. ಬಸವಣ್ಣನಿಗಿಂತ ಒಂದು ಕೈ ಮೇಲು. ಮರಗಿಡಗಳನ್ನೆಲ್ಲಾ ಸೊಂಡಿಲಲ್ಲೇ ಕಿತ್ತುಹಾಕಬಲ್ಲ. ಅವನಿಗೆ ಮನೆ ಏಕೆ? ಕುಡುಗೋಲನ್ನು ನಂಬಿದರೆ ನಿಮ್ಮ ಕುತ್ತಿಗೆಗೆ ಕತ್ತಿ ಬೀಳುವುದು.

ಗಣೇಶ–ಗಣೇಶ-ಗಣಪನೇ ನಿಮಗೆ ಗತಿ. ಗಣಪನ ಡಬ್ಬಕ್ಕೆ ಹಾಕಿರಿ.

—ಹಾರು.

——o——

# ಕಿವಿಯಾಗ್ಬಿದ್ದ ಮಾತು

ಆಡಿದ್ಮಾತು ಕಿವಿಯಾಗ್ಬಿದ್ರೆ
ಸಾಲ್ದು ಸುಮ್ ಸುಮ್ನೆ
ಮಂಡೇಲದನ್ನ ಮಗುಚ್ಹಾಕ್ತಿದ್ರೆ
ಮನ್ಸ್ಯಾಂಬೋದು ಸುಮ್ನೆ !

*          *          *

ಹಾರೋರ್ ಬೀದಿ ದೀಕ್ಷಿತ್ರಂದ್ರೆ
ನಮಗೆಲ್ಲಾಗೂ ಗೊತ್ತು
ತಿತಿ ಮಾಡ್ಸಿ ಕೂಡ್ಹಾಕ್ತಿದ್ರು
ಮಕ್ಕಳ್ಗಿಂದು ಸೊತ್ತು

ಹಣ್ಣಣ್ಮುದುಕ, ಹರಾಂಬ್ಹೊತ್ತು
ಮಕ್ಳನ್ಬರ್ರೋತಂದ್ರು—
ಉಸ್ರು ನಿಲ್ಲೋ ನಿಮಿಷಕ್ಮೊದಲು
ಬುದ್ಪಾದಾಂತ ಅಂದ್ರು—

"ಅಪ್ಪಾ ಶೀನಿ—ನೋಡೋ ನಾಣಿ
ನಾನಿನ್ನಿರೋದಿಲ್ರೋ—
ಮುಂದಕ್ ನೀವು ಪಾಯ್ಸ ಉಂಡು
ಬಾಳ್ಬೇಕ್ ತಿಳೀತಲ್ರೋ"

ದೀಕ್ಷಿತ್ರಾಟ ಮುಗಿದ್ಹೋಯ್ತಂದ್ರೆ
ಮನೆಯಾಗಾಯ್ತು ಭಾಗ—
ಸೀನಪ್ನೋರು ಶಾರಲ್ಲಿ ಸಿಂತ್ರು
ಕಿರಿಯೋರ್ ಊರ್ನಾಗ

ಅಪ್ಪನ್ಮಾತು ನಡ್ಸೋದ್ ನಾಯ
ಅಂದ್ರು ಸೀನಪ್ಪ—
ಖೀರು ಪಾಯ್ಸ ಮಾಡ್ಸಿ ಹೊಡ್ದ
ದಿನವೂ ನೋಡ್ರಪ್ಪ!

ನಾಣಪ್ನೋರೋ ಬಲ್ಬಲೆ ಘಾಟಿ
ಗಂಜಿ ಮಾಡ್ಸೇ ಉಂಡ್ರು—
ಅಯ್ಯನ್ಮಾತಿನ್ ತಿರುಳನ್ತಿಳ್ದು
ಅದ್ನೇ ಪಾಯ್ಸಾಂತಂದ್ರು.

ಮುಂದಿನ್ ಕತೇನ ನಾ ಹೇಳ್ಬ್ಯಾಕ
ನಿಮಗೇ ತಿಳಿಯೋದಿಲ್ವಾ?
ಸೀನಪ್ನೋರು ಖೀರುಂಡುಂಡು
ಮನೆ ಮಾರ್ ಕಳ್ಕೊಂಡ್ರಲ್ಲಾ!

ಹಾಳಪ್ಪಾಂತ ಅಣ್ಣಾವ್ರಂದ್ರೆ
ಅಪ್ಪನ್ಮಾತ್ ನಿಜಾಂದ್ರು—
ನಾಣಪ್ನೋರು ಅಯ್ಯನ್ಸೊತ್ನ
ಕಾಪಾಡ್ಕೊಂಡೇ ಬಂದ್ರು

* * *

ಅದ್ಕೆ ಅನ್ನಾದ್--ಮನ್ಸ ಮಾತ್ನ
ಕಿವಿಯಾಗ್ ಕೇಳ್ದ್ರೆ ಸಾಲ್ದು
ಮುಂಡೇಲದನ್ನ ಮಗುಚ್ಹಾಕ್ಬೇಕು
ಕೇಳೋದೊಂದೇ ಸಾಲ್ದು—

—ಎ. ಎಸ್. ರಾಮಕೃಷ್ಣ.



ಈ ಟ್ರಾಫಿಕ್ ಸೈನ್ ನೋಡಿ ಓಡಾಡ್ರಿ ಗೊತ್ತಾಗೊಲ್ವೆ?

# ದಿಲ್ಲಿಯ ದಿನಚರಿ

“ ಹಾರು ”

---

ಪ್ರಿಯ ಕಿಟ್ಟಿ,

ನಾನು ಪಾರ್ಲಿಮೆಂಟ್ ಮೆಂಬರಾಗಿ ಇಲ್ಲಿಗೆ ಬಂದ ಮೇಲೆ ಇಲ್ಲಿಯ ವಿಚಾರವನ್ನು ನನ್ನಿಂದ ತಿಳಿಯಲು ನೀವು ಕುತೂಹಲಿಗಳಾಗಿರುವುದು ಸಹಜ ವಾಗಿದೆ "ದೂರದ ಬೆಟ್ಟ ನುಣ್ಣಗೆ" ಎಂಬ ಹಾಗೆ ನೀವು ಏನೇನೋ ಕಲ್ಪಿಸಿ ಕೊಂಡಿರುತ್ತೀರ. ಆದರೆ ನಾನು ಇಲ್ಲಿಗೆ ಬಂದ ಮೇಲೆ ಅಂಥ ಮನಸ್ಸನ್ನು ಹಿಡಿಯುವ ವಾತಾವರಣವಿಲ್ಲವೆಂದು ಕಂಡುಕೊಂಡೆ.

ಏನು ಹೇಳಲಿ ಹೇಳು. ಈ ಪಾರ್ಲಿಮೆಂಟಿನಲ್ಲಿ ಕುಳಿತಿರಲು ಬೇಜಾರಾಗುವುದು. ಇಲ್ಲೇನು ಅದೇ ಅವರೇ ಕಾಮತ್, ಭಾರ್ಗವಾ, ಷಾ—ನಾಲ್ಕಾರು ಜನ ಸದಾ ಮಾತನಾಡುತ್ತಿರುತ್ತಾರೆ. ಅದು ಏನು ಮಾತನಾಡುತ್ತಿರುತ್ತಾರೋ ದೇವರೇ ಬಲ್ಲ. ನನಗಂತೂ ತಿಳಿಯುವುದೇ ಇಲ್ಲ. ಗಂಟೆಗಟ್ಟಲೆ ನಿಂತುಬಿಡುತ್ತಾರೆ. ಆ ಕಾಮತ್ ಇದ್ದಾನಲ್ಲ, ಅವನು ಗಳಿಗೆಗೊಂದು ಸಲ ನಿಂತುಕೊಂಡು ಏನಾರಾ ಕೇಳುತ್ತಿರುತ್ತಾನೆ. ಸಭೆಯನ್ನು ಸರಾಗವಾಗಿ ನಡೆಯಗೊಡುವುದೇ ಇಲ್ಲ. ನನಗಂತೂ ಬೇಸರವಾಗಿ ಹಿಂದುಗಡೆ ಬೆಂಚಿನಲ್ಲಿ ಕೂತುಕೊಂಡಿರುತ್ತೇನೆ. ಹಾಗೆ ಒಂದೊಂದು ದಿನ ಜಂಪು ಬಂದುಬಿಡುತ್ತೆ. ಹಾಳಾದ್ದು ನಿದ್ದೆ ಮಾಡಬಾರದೆಂದು ನಿಯಮ ಬೇರೆ ಮಾಡಿಕೊಂಡುಬಿಟ್ಟಿದ್ದಾರೆ. ಸುಮ್ಮನೆ ಮನೆಯಲ್ಲಿಯೇ ಇರೋಣ ಎಂದರೆ, ದಿನಕ್ಕೆ ಐವತ್ತು ರೂಪಾಯಿ ಕಳೆದುಕೊಳ್ಳಲು ಸಾಧ್ಯವೆ? ಹೇಗೋ ಅಂತೂ ಕಾಲಕಳೆಯುತ್ತಿದ್ದೇನೆ.

ನಮ್ಮ ಲೀಡರು ಜವಾಹರರು ದೊಡ್ಡವರೇನೋ ಸರಿ. ಎಲ್ಲರೂ ಹಾಗೇ ಹೇಳುತ್ತಾರೆ. ಆದರೆ ನನಗಂತೂ ಅವನ ಮಾತೇ ಅರ್ಥವಾಗುಲ್ಲ. ಒಂದೊಂದು ಸಾರಿ ಬೇಸತ್ತು ಯಾಕೆ ಈತನನ್ನು ಲೀಡರು ಮಾಡಿದೆವೋ ಎಂದುಕೊಳ್ಳುತ್ತೇನೆ ನಮ್ಮ ಪ್ರಾಂತದ ಒಬ್ಬ ಮಂತ್ರಿಯನ್ನೇ ಕರೆತಂದು ಇಲ್ಲಿ ಲೀಡರು ಮಾಡಿದ್ದರೆ ಚೆನ್ನಾಗಿರುತ್ತಿತ್ತು. ನಮಗೂ ಉಪಯೋಗ ಇರುತ್ತಿತ್ತು. ಈಗ ನಮಗೆ ಏನೂ

ಉಪಯೋಗವೇ ಇಲ್ಲ. ಏನಾದರೂ ಮಾಡಿಕೊಳ್ಳಲಿ ಎಂದು ಸುಮ್ಮನಿದ್ದು ಬಿಟ್ಟಿದ್ದೇವೆ. ಮುಂದಿನ ಸಾರಿ ನಮ್ಮ ಪ್ರಾಂತದ ರಾಮಯ್ಯನನ್ನು ಲೀಡರೋ ಉಪಲೀಡರೋ, ಮಾಡಬೇಕೆಂದು ನಿರ್ಧರಿಸಿದೇವೆ.

ನೀನೇನೋ ಅಲ್ಲಿ ಕುಳಿತು "ಇವನು ಪಾರ್ಲಿಮೆಂಟಿನಲ್ಲಿದ್ದರೂ ನಿಷ್ಪ್ರಯೋಜಕ—ಏನೂ ಮಾತೇ ಆಡುವುದಿಲ್ಲ" ಎಂದುಕೊಳ್ಳುತ್ತೀಯ. ಮಾತನಾಡೂಕೆ ಏನು ವಿಷಯವಿರುತ್ತೆ? ಎಲ್ಲಾ ಅವರಿವರು ಕೇಳಿಯೇ ಬಿಟ್ಟಿರುತ್ತಾರಲ್ಲ. ನಾನೂ ಒಂದೆರಡುಬಾರಿ ಪ್ರಶ್ನೆ ಕಳಿಸಿದೆ, "ಈ ಪ್ರಶ್ನೆಗೆ ಹಿಂದೆಯೇ ಉತ್ತರ ಹೇಳಿದೆ" ಎಂದು ತಿಳಿಸಿದರು. ಹಾಗೆಂದುಕೊಂಡು ನಾನೇನು ಸುಮ್ಮನೆ ಕುಳಿತಿಲ್ಲ. ಕಳೆದ ವರ್ಷ ಕೇಳಿದ ಪ್ರಶ್ನೆಗೆ ಉತ್ತರ ಬಂದಿತ್ತಲ್ಲ. ಅದರ "ಕಟಿಂಗ್" ನಿನಗೆ ನಾನೇ ಕೊಟ್ಟಿಲ್ಲವೇ? ಅಷ್ಟೇ ಸಾಕು ನನಗೆ. ಇನ್ನೊಂದು ಮಾತು. ಹಾಳು ಇಲ್ಲಿಯ ಆಫೀಸಿನವರೂ, ಪೇಪರಿನವರೂ ಎಲ್ಲಾ ಜಾತೀಯವಾದಿಗಳು. ನಮ್ಮ ಚಟುವಟಿಗೆಗಳ ಬಗ್ಗೆ ಏನೂ ಬರೆಯುವುದೇ ಇಲ್ಲ.

ಸಂಜೆಯಾದಾತೇ ಎಂದು ಕಾಯುತ್ತಿರುತ್ತೇನೆ. "ಕನ್ನಾಟ್ ಸರ್ಕಸ್" ಬಳಿ ಕುಳಿತು ಹರಿದಾಡುವ "ಬಣ್ಣದ ದೆವ್ವ"ಗಳನ್ನು ನೋಡುತ್ತಿರುತ್ತೇನೆ. ಅದೇ ಕಣ್ಣಿಗೆ ಆನಂದ. ಇಲ್ಲಿಯ ಊಟವೂ ಚೆನ್ನಾಗಿರುತ್ತೆ. ಬಗೆಬಗೆಯ ಅಡಿಗೆ ಮಾಡುತ್ತಾರೆ. ನಮ್ಮಲ್ಲಿಯಂತೆ ಕೋಳಿ, ಕುರಿಮಾಂಸವಾದರೂ ಮಾಡುವ ರೀತಿ ಚೆನ್ನಾಗಿರುತ್ತೆ. ಈ ಊಟದಿಂದಲೇ ನಾನು ಹತ್ತು ಪೌಂಡು ಜಾಸ್ತಿಯಾಗಿದೀನಿ. ಈ ಸಾರಿ ನಾನು ಊರಿಗೆ ಬಂದರೆ ನೀನು ನನ್ನನ್ನು ಗುರುತಿಸಲೂಲಾರೆ !!

ಆಗಾಗ್ಯೆ "ಟೀ"ಪಾರ್ಟಿಗಳಿಗೆ ಹೋಗಿ ಬರುತ್ತೇನೆ. ಆದರೆ ಅಲ್ಲೂ ಬೇಸರವೇ. ಯಾರೂ ನನ್ನನ್ನು ಮಾತನಾಡಿಸುವುದೇ ಇಲ್ಲ. ಅದೇ ನಮ್ಮ ಪ್ರಾಂತದ ಗೌಡಯ್ಯ, ರಾಮಯ್ಯ, ಸೀತಾರಾಮಯ್ಯ ಇವರೊಡನೆಯೇ ಕುಳಿತಿರಬೇಕು. ಅವರಿಗೆತಾನೇ ಪಾಪ, ಬೇಸರವಿಲ್ಲವೇ? ನನ್ನಂತೆಯೇ ಕಷ್ಟಪಟ್ಟು ಕುಳಿತಿರುತ್ತಾರೆ. ಈ ಉತ್ತರ ದೇಶದವರಿಗೆ ತುಂಬಾ ಜಂಭ! ನಮ್ಮನ್ನು ಕಂಡರೆ ಅನಾದರ. ಮೊನ್ನೆ ಒಂದು ಟೀಪಾರ್ಟಿಗೆ ಹೋಗಿದ್ದೆವು. ನಮ್ಮ ಪ್ರಾಂತದ ಲೀಡರು ರಾಮಯ್ಯನೊಡನೆ ಕುಳಿತಿದ್ದೆ. ಆ 'ಗುಜರಾಥಿ' ಮುನ್ಷಿ ಬಂದು ರಾಮಯ್ಯನಕೂಡಾ ಮಾತನಾಡುತ್ತಿದ್ದ. ಆ ಮೇಲೆ ನನ್ನ ಕಡೆಗೆ ತಿರುಗಿ "ಇವರಾರು? ದಿಲ್ಲಿಯನ್ನು ನೋಡಲು ಬಂದಿರುವರೋ?" ಎಂದು ಕೇಳಿದ. ಅದಕ್ಕೆ ರಾಮಯ್ಯ "ಏನುಸ್ವಾಮಿ, ಇವರು ಪಾರ್ಲಿಮೆಂಟ್ ಮೆಂಬರು. ಮೂರು ವರ್ಷದಿಂದ ಇದ್ದಾರಲ್ಲ" ಎಂದರು. ನನಗೆ ಸಿಟ್ಟು

ಬಂದು ಮುನ್ಸಿಯ ಮುಖಕ್ಕೆ ಎರಡು ಬಿಡಲೇ ಎಂದು ಇದ್ದೆ. ಆ ಗರ್ವಿಷ್ಠ "ಏನು ನಾನು ಒಂದು ದಿನವೂ ನೋಡಿಯೇ ಇಲ್ಲವಲ್ಲ" ಎನ್ನುವುದೇ? ಇವರೆಲ್ಲಾ ಏನಂತೀಯ? ತುಂಬಾ ಸ್ವಾರ್ಥಿಗಳು "ಜಾತೀಯ ವಾದಿಗಳು. ತಮ್ಮ ತಮ್ಮವರಿಗೇ ಬೆಂಬಲ ಕೊಡುತ್ತಾರೆ. ಅದೇ ನಮ್ಮ....ಗೆ ಕರೆದು ಅನೇಕ ಕಮಿಟಿಗಳಿಗೆ ಹಾಕಿದ್ದಾರೆ—ಮುಂದಿನ ಸಾರಿ ಇವರನ್ನೆಲ್ಲಾ ಅಧಿಕಾರ ದಿಂದ ಕೆಳಗಿಳಿಸಬೇಕು." ಇರಲಿ.

ಇವತ್ತಿಗೆ ಇಷ್ಟು ಸಾಕು ನಾನು ಅಲ್ಲಿಗೆ ಬಂದಾಗ ಉಳಿದ ವಿಚಾರ ತಿಳಿಸುವೆ. ನೀನು ಹುಶಾರಾಗಿ ಕೆಲಸ ನಡೆಸಿರುವೆ ತಾನೆ? ಪ್ರಾಂತ ಅಸೆಂಬ್ಲಿಗೆ ನಿಲ್ಲಲು 'ನೆಲ ಗಟ್ಟಿ' ಮಾಡು. ನಾ ಬರುವ ಹೊತ್ತಿಗೆ 'ಗೂಳೂರು' ಮೈಲಾಪುರ' 'ರಾಂಪುರ'ಗಳಲ್ಲಿ ಬಿನ್ನವತ್ತಲೆಗಳನ್ನು ಏರ್ಪಾಡು ಮಾಡಿಸಿರು.

ಎಷ್ಟೇ ಆದರೂ ನಮ್ಮೂರೇ ನನಗೆ ಸರಿ!!

ನಿನ್ನ,

'ಹಾರು'



ಎಷ್ಟು ಚೆನ್ನಾದ ಮಾಡೀ ಪೆಟ್ಟಿಗೆ ಮಾರ್ತಾನಪ್ಪ
— ಅವನಿಗೇ ಓಟು ಕೊಡೋಣ.

# ನನ್ನ ಯೆಂಡತ್ತಿ

ಮೋಯಿನಿಯವತಾರವೆತ್ತಿ—ಮಂಕು
ರಾಕ್ಷಸರಿಗೆ ಪೊನ್ನೆ ಸುತ್ತಿ—ದೇವ-
ತೆಗಳಿಗೆ ಅಮೃತದ ಬುತ್ತಿ—ತಂದ
ಮಾದರಿ ಯಾರೇ—ಸೌಟ ಯಿಡಿದೆತ್ತಿ?
    ನೀನಲ್ಲವೇ ನನ್ನ ಯೆಂಡತ್ತಿ!

ಕಲ್‌ತುಂಬ ರೇಸನ್ ಅಕ್ಕ್ಯಾಗ—ಅಸೀ
ಸೌದೇದು ವೊಗೆ ಸುತ್ತಿ ಮೂಗ— ಬ್ಯಾಳೆ
ಬೇಯದೆ ಬಾವೀನೀರಾಗ—ಅಡಿಗೆ-
ಮನೆಯೊಳಗ್ಯಾರೇ—ದಿನಕೆರಡು ಸತ್ತಿ?
    ನೀನಲ್ಲವೇ ನನ್ನ ಯೆಂಡತ್ತಿ!

ಮನೆ ತುಂಬ ಮೂರ್ ಮಕ್ಕಳ್ ಕೊಟ್ಟು—ತಿದ್ದಿ
ನೇರಮಾಡುತ ಅವರ ಸೊಟ್ಟು—ಬಿಡತ
ಆಗಾಗ ನಂಗೂ ಒಂದ್ ಮೊಟ್ಟು—ನೋಡಿ
ಬೀಸುವರ್ ಯಾರೇ ಮಾತಿನ ಕತ್ತಿ?
    ನೀನಲ್ಲವೇ ನನ್ನ ಯೆಂಡತ್ತಿ!

ನಗತಿದ್ರೆ ನೀ ರಾಮುನ್ ಯೆಣ್ಣು!—ಕೆಳ್ಳ
ಬುಟ್ಟೇಂದ್ರೆ ಬಲಬೀಮುನ್ ಕಣ್ಣು!—ಸಡ್ಡೆ
ಮಾಡ್ಡಿದ್ರೆ ನಾ ನಿಂಗೆ ಮಣ್ಣು!—ಯಿಂಗೆ
ಮೀಟೋರ್ ಯಾರೇ ಪ್ರೀತಿಯ ಬತ್ತಿ?
    ನೀನಲ್ಲವೇ ನನ್ನ ಯೆಂಡತ್ತಿ!

ನೆಗ್ತಿರ್ತಿ ಮಲ್ಗೆ ವೂನಂಗೆ—ಗದರಿ
ಸಿಡುಗುಡ್ತಿ ಮಿಂಚುಗುಡುಗಂಗೆ—ಅಂಗೇ
ತತ್ತೀಯ ಕಣ್ಣಾಗ ಗಂಗೆ—ಇಂಗ್ನನ್ನ
ಆಡ್ಸೋರ್ ಯಾರೇ ಇಲೀನ್ ಆಡ್ಸೋವಂಗ್ ಕೊತ್ತಿ?
    ನೀನಲ್ಲವೇ ನನ್ನ ಯೆಂಡತ್ತಿ!

ಮುತ್ತಾಯಿ! ಮನೆಲಚ್ಮಿ ಮಲ್ಲಿ!— ನೀನೆ
ಕೆಂಪೊಜ್ರ! ನಿನ ಪಕ್ಕದಲ್ಲಿ— ಬ್ಯಾರೆ
ಯೆಣ್ಣೆಲ್ಲ ನಡರಸ್ತೆ ಜಲ್ಲಿ!—ಅನಿಸಿ
ಯಿಡಿದೋರ‍್ಯಾರೇ ನನ್ನ ನಿಂಗೆ ಮೋಗೆತ್ತಿ?
ನೀನಲವೇ ನನ್ನ ಯೆಂಡತ್ತಿ!

—ನಾಗ.

— o —




ಸೇಟ್‌ಜಿ:—(ಕೋಪದಿಂದ) ನಮ್ಮಂಗಡೀ ಎದುರಿಗೇ ಹೀಗೆ ರಸ್ತೆ ಅಗೆದು ಹಾಕಿದರೆ ಹ್ಯಾಗಯ್ಯಾ ವ್ಯಾಪಾರ ನಡೆಯುತ್ತೆ!

ಕೂಲಿಯವ:—ಬುಡೀ ಸೇಟ್. ನಾಲ್ಕು ದಿನ ನಿಮಗೆ ವ್ಯಾಪಾರ ಇಲ್ಲದೆ ಇದ್ದರೆ. ನಾಲ್ಕು ಮನೆ ಉದ್ಧಾರ ಆಗುತ್ತೆ.

# ದಿಲ್ಲೀಲಿ ನಮ್ಮ ಸಂಘ

—

ನಮ್ಮಕ್ಕ ಭಾವನ್ನ ದಿಲ್ಲೀ ಆದಿಕರ್ಣಾಟಕರ ಗುಂಪಿಗೆ ಸೇರಿಸಬಹುದೂನ್ನಿ.

ಸನ್ ಸಾವಿರದೊಂಭೈನೂರ ಎಪ್ಪತ್ರಲ್ಲೋ ನಂಭಾವ ಅವರ್ತಂದೆ ಕೈಲಿ ಜಗಳ ಆಡಿಕೊಂಡು ರೈಲಿನಲ್ಲಿ ಕೂತ್ಕೊಂಡು ಓಡಿಹೋದ್ರಂತೆ. ಕೆಲವು ವರ್ಷಗಳ ಹಿಂದೆ ನಮ್ಮಕ್ಕನ ಜತೇಲಿ ಅವಳ ವರಾನ್ವೇಷಣಾರ್ಥಿಯಾಗಿ ಖೈಬರ್ ಪಾಸಿನಲ್ಲಿ ಕಾಫಿ ಅಂಗಡಿ ಇಟ್ಟುಕೊಂಡು ಜೀವಿಸುತ್ತಿದ್ದ ಒಬ್ಬ ವರನ ಮುಂದೆ ನಮ್ಮಕ್ಕನ ಮುಖ ತೋರಿಸಿ 'ಅವಲಕ್ಷಣಾ' ಅನ್ನಿಸಿಕೊಂಡು ದಿಲ್ಲೀ ಮೇಲೆ ವಾಪಸ್ ಬರುತ್ತಿರುವಾಗ್ಗೆ, ಹ್ಯಾಗೋ ಮಿಲ್‌ಟ್ರೀ ಡ್ರೆಸ್ಸಿನಲ್ಲಿದ್ದ ಈ ಕನ್ನಡಿಗನ ಕೂಗು ಹಿಡಿದು ಬೆನ್‌ಹತ್ತಿದ್ರಂತೆ ನಮ್ತಂದೆ. ಅಂತೂ ನಮ್ತಂದೆ ಕೊನೇಗೆ ಕಂಕ್ಣ ಕೂಡ್ಸೇಬಿಟ್ರು, ನಮ್ಮಕ್ಕನ ಕುತ್ತಿಗ್ಗೆ ತಾಳಿ ಬಿಗ್ಸಿಸಿದ್ರೂನ್ನಿ.

ಆ ಮೇಲೆ ಏಕ್‌ದಂ ಒಂಟಿ ಹುಡುಗೀನ್ನ ಹೇಗೆ ಈ ಖಧೀಮನ ಜತೇಲಿ ಆ ದೀಪಾಂತರದ ಪಟ್ಣಕ್ಕೆ ಕಳುಹಿಸೋದೂಂತ ನಮ್ತಾಯಿ ಹಟ ಹಿಡಿದುದರ ಮೇರೆಗೆ ನಮ್ಮಕ್ಕನ ಸಹಾಯಕ್ಕೇಂತ ನಾನು ಒಂದು ಕೆಲವು ದಿನಗಳ ಮಾತ್ರ ದಿಲ್ಲೀ ಪ್ರವಾಸ ಕೈಗೊಂಡಿದ್ದೆ ಕುತುಬ್ಬನ ಮಿನಾರು, ಕೆಂಪಿನ ಕೋಟೆ ಇನ್ನೂ ಏನೇನೋ ಸುತ್ತಾಕಿದ್ದಾಯಿತು. ಆದರೆ ನಾ ಕಂಡಿದ್ದೇನು? ಕನ್ನಡದ ಗೈರುಹಾಜರೀ!........

ಆ ಕೆಂಪು ಕೋಟೆ ಮೇಲೆ, ಆ ಗೋಪುರ ಗುಹೆಗಳಲ್ಲಿ ಯಾವ ಕಡೆಯಲ್ಲಿ ನೋಡಿದರೂ ಸಹ ತಾವು ಬಂದ ಸ್ಮಾರಕವಾಗಿ ಅಲ್ಲಿನ ಕಲ್ಲಿನ ಮೇಲೆ ಕೆತ್ತಿಯೋ, ಅಲ್ಲಿನ ಗೋಡೆಗಳ ಮೇಲೆ ಕರಿಯಲ್ಲಿ ಗೀಚಿಯೋ ಜನ್ಮ ಸಾಫಲ್ಯ ಪಡೆದಿದ್ದ ದಂಪತಿಗಳೆನಿತೂ? ಕಿಂಪುರಷರ ಲೆಖ್ಖವೇನು? ವಿಧುರರೋ! ಮಧುವಾಲೆಯರೋ!........

ಈ ಭಾಷೆ ಬಂಗಾಳಿ, ಇದು ಮನೆಹಾಳಿ, ಅದು ದೇವನಗಿರ, ಇದ ವಂಗ, ಇದು ತುಳ ಮತ್ತೆ ಅದು ತಮಿಳು ಎಂಬುದಾಗಿ ಅಲ್ಲಿನ ಲಿಪಿ ಸಮುದಾಯದ ಮೂಲಗಳನ್ನ ಸ್ಪಷ್ಟಪಡಿಸಿದರು ನನ್ನ ಭಾವ.

ಆದರೇ ನಮ್ಮ ಕಸ್ತೂರಿ ಎಲ್ಲಿ? ಕನ್ನಡವೆಲ್ಲಿ?... ಎಲ್ಲಿಯೂ ಆ ಕಳೆದ ಸಿಗುರಿನಂಥಹುದು ಕಾಣ ಬರಲಿಲ್ಲ....ಹಾಯ್ ! ಯಾಕೆ ಅದರ ವೈಯ್ಯ ಉಷ್ಣ ಪೂರ ಅಳಿದುಹೋಯಿತೆ? ಆ ಸುಲಿದ ಬಾಳೆಯ ಹಣ್ಣನ್ನ ಯಾರಾದರೂ ನುಂಗಿಬಿಟ್ಟರೆ? ಎಂದು ಕಾತರಸಿ ಹಂಬಲಿಸಿದ ನನ್ನ ಕಂಬನಿ ನನ್ನ ಭಾವ ನೋಡಿ ಹೀಗೆಂದು ಉವಾಚಿಸಿದರು!

ನೋಡು ಗುಂಡೂ ನಾವೇನು ಮಾಡೋಣ, ನಮ್ಮ ಭಾಷೆ, ನಮ್ಮವರೂ ಮುಂದೇ ಬರ್ಲೀಂತ ನಾವಿಲ್ಲಿರುವ ಒಂದೇಳೆಂಟು ಜನ ಬಂದು ನಮ್ಮ ಸಂಘಾಂತ ಸ್ಥಾಪಿಸಿ ಅದನ್ನಭಿವೃದ್ಧಿಗೆ ತರಲು ಬೀಳಬಾರದ ಪಾಡು ಬಿದ್ದೆವೂ....ಕೇಳು. ನಮ್ಮ ಸಂಘದೆಸರು ಹತ್ತು ಬಾಯಲ್ಲಿ ಬರಲೀ, ನಮ್ಮ ಸಂಘದ ಬೋರ್ಡು ನಾಲ್ಕು ಕಣ್ಣ ಚುಚ್ಚಲೀಂತ ಅಲ್ಲೊಂದು ರೇಷನ್ ಅಂಗಡೀ ತೆಗೆದವೂ, ಒಂದು ಟ್ರಾಫಿಕ್ ಚೌಕವನ್ನ ಏರ್ಪಡಿಸೀ ಒಂದೆರಡು ಅಕಸ್ಮಿಕಗಳು ನಡೆಯುವಂತೇ ನೋಡಿಕೊಂಡೆವೂ, ನಾವೇಳೆಂಟು ಮಂದಿಯೂ ವಿವಿಧ ವಾಚನಾಲಯಗಳಿಗೆ ತೂರಿ, ಅಲ್ಲಿ ಸಾಧ್ಯವಾದಷ್ಟು ಪುಸ್ತಕಗಳಲ್ಲಿ ಕನ್ನಡವನ್ನ ಓದಬೇಡೀಂತ ಹಿಂದೀಲಿ ಬರೆದೆವೂ, ಗುಮಾನೀಮೇಲೆ ಆದರೂ ಓದೇ ಓದುತ್ತಾರೆ ಎಂಬ ದುರಾಶೇಮೇಲೆ, ಆದರೇ ಆಗ ವಾಚಿಗಳೆಲ್ಲಾ ನಮ್ಮ ಗಂಟಲಲ್ಲಿ ನೀರಿಳಿಯುವುದು ಬೇಡ, ಕಡುಬಿನಂಥನೇ ತುರಕೀ ಅಂದರು!

ಆಮೇಲೆ ಕನ್ನಾಟನು ನಮ್ಮವನೇ ಎಂದು ನಮ್ಮಲ್ಲೇ ವಾದಿಸಿ ತೀರ್ಮಾನಿಸಿ ಆತನ ಸರ್ಕಸ್ಸನ್ನ ಕರ್ನಾಟಕ ಸರ್ಕಸ್ ಅಂತಲಿದ್ದ ಬೋರ್ಡು ಹಾಕಿ ಜೈಕಾರ ಪ್ರಾರಂಭಿಸಿದೆವೂ....ಉಹ್ಞು! ಪರಸ್ಥಳದಿಂದ ಬಂದವರಿಗೆ ಉಚಿತವಾಗಿ ಊಟ ವಸತಿಗಳನ್ನು ನಮ್ಮವರು ಒದಗಿಸುತ್ತಾರೆ ಎಂಬ ವದಂತೀನ್ನ ಹಬ್ಬಿಸಿದರೂ .. ಯಾರಿಗೂ ಬಿಸಿ ತಟ್ಟಲಿಲ್ಲಾ. ನಂಬಲಾರದ ಜನ!

ನಮ್ಮ ಸಂಘವನ್ನ ಹುಡುಕಿಕೊಂಡು ಬರುವಂಥವರಿಗೇ ತಪ್ಪು ಅಡ್ರೆಸ್ ಕೊಟ್ಟೆವೂ ಹಾಗಾದರೂ ಹುಡುಕುವವರು ನಮ್ಮ ಸಂಘದ ಹೆಸರು ಹತ್ತುಕಡೇ ಇಪ್ಪತ್ತು ಕಿವೀಗೆ ಹಾಕಲೀ ಎಂಬ ಯೋಜನೇಮೇಲೆ! ಎಲ್ಲಾ ವಿಫಲವಾದದ್ದು ನೋಡಿ ಸಂಘವಿರುವ ಜಾಗ ವೈನವಿಲ್ಲಾ, ರಸ್ತೇ ಶೋಕದ್ದು, ಇದು ಬೇಡ ಸ್ಮೂತಾಗಿ ಕೆಲಸ ಜರುಗಬೇಕಾದ್ರೆ ಸರಿಯಾದ ಜಾಗವೂ ಮುಖ್ಯ ಅಂತ ಎಣ್ಣೆಗಾಣದ ರಸ್ತೇಗೆ ಸಾಗಿಸಿದೆವೂ....

ಉಗಾದಿಗೊಂದು ಸಾರಿ ಯಾರದಾದರೂ ಕುಣಿತ ಏರ್ಪಡಿಸಿ ಕೂಟ ಕೂಡಿಸೋಣ ಅಂತ ಎಲ್ಲರಿಗೂ ಬರಲು ಟಾಂಗ ಚಾರ್ಜು ಕೈಯಿಂದ ಕೊಟ್ಟು ಬಂದೆವೂ ...ಅವರು ಅದೇ ಟಾಂಗಗಳಲ್ಲಿ ಟಾಕೀಸುಗಳಿಗೆ ಹೋದರು! ಇನ್ನೇನು ಮಾಡುಕ್ಕೆ ಸಾಧ್ಯವಪ್ಪ....ಇದು ಕನ್ನಡಿಗನ ಕೊರಗು ...

ನಮ್ಮವರು ಇಲ್ಲಿ ಇಲ್ಲದೇ ಇಲ್ಲಾ. ಹೆಸರಿಲ್ಲದ ಮೀನುಗಳಂತೆ ಇದ್ದೇವೆ ಆದರೆ ಕೂಗರಿಯುಂದ ಕುರಿಗಳಂತಿದ್ದೇವೆ....ಎಂಬುದಾಗಿ ನೊಂದುಕೊಂಡರು ನಮ್ಮ ಭಾವ. ಇದು ೧೬ ವರ್ಷದ ಮಾತೂ. ಈ ಮೊನ್ನೆ ನನ್ನನ್ನ ದೀಪಾವಳೀಗೆ 'ಬಾ' ಅಂತ ನಮ್ಮಕ್ಕ ಭಾವನವರಿಂದ ಕಾಗದ ಬಂದಿತ್ತು. ದಿಲ್ಲೀಗೆ ಟಿಕೆಟ್ ತೆಗೆದುಕೊಂಡು ದಿಲ್ಲಿ ರೈಲಿನಲ್ಲಿ ಕೂತುಕೊಂಡು ಅಕ್ಕ ಪಕ್ಕದಲ್ಲಿದ್ದವರನ್ನ ಎಲ್ಲಿಗೇಂತ ವಿಚಾರಿಸತೇನೇ! ಎಲ್ಲಾ ದಿಲ್ಲೀಗೆ! ಕಾರಣ ಕೇಳಿದ್ರೇ ಹೇಳಿದ್ರು—"ಅಲ್ಲಿ ಒಂದ್ನಮ್ಮ ಸಂಘ ಇದೇ... ಅದಕ್ಕೆ ಒಂದು ಕಮಿಟೀ ಇದೇ ಅದಕ್ಕೆ ಮೆಂಬರಾಗುಕ್ಕೆ ನಾನೊಬ್ಬ ಕ್ಯಾಂಡಿಡೇಟು!" ಎಲ್ಲರೂ ಇದೇ ಮಾತೇ....

"ದಿಲ್ಲಿ ಸ್ಟೇಷನ್‌ಲ್ಲೇ ನಂಭಾವನ್ನ ಕೇಳಿದೇ ಏನ್ಬಾವ ಇದ್ರಮರ್ಮಾಂತ! ನೋಡು ಗುಂಡೂ ಮೊದಲೇ ಬುದ್ಧಿ ಬರದೇ ಹೋಯ್ತು ನನಗೆ! ಈ ಕಾಂಗ್ರೆಸ್ ಎಲೆಕ್‌ಷನ್ ಗಡಿಬಿಡಿ ನೋಡಿದಮೇಲೆ ಸ್ಫೂರ್ತಿ ಬಂತೂ... ಒಂದು "ಕಮಿಟಿ" ಒಂದು "ಮೆಂಬರ್‌ಷಿಪ್" "ಓಟೂ" ಅಂದರೇ ಅಲ್ಲಿ ಏನೋ ಇದ್ದೇ ಇದೇಂತ ಜನ ಎಲ್ಲಿದ್ರೂನೂ ಎಲ್ಲಿ ಇಲ್ಲದ ಉತ್ಸಾಹ ತೋರಿಸುತ್ತಾರೆ. ಎಂಬೋದು ಮೊನ್ನೆನ್ನೆ ತಿಳೀತು ನೋಡು ನಂಗೆ... ಈಗ ನಮ್ಮ ಸಂಘದ ಕಮಿಟೀಗೂ ಎಲೆಕ್ಷನ್ ಇಡಿಸಿದ್ದೀವಿ, ಈಗೇನೂಂತೀಯಾ... ನಂಸಂಘದ ೬ ಜನ ಸದಸ್ಯತ್ವಕ್ಕೆ ೬೦೦ ಜನ ಉಮೇದುವಾರರು ರಿಜಿಸ್ಟರ್ ಮಾಡಿಕೊಂಡಿದ್ದಾರೆ ನೋಡು!

ಏನೋ ಕನ್ನಡಿಗನ ಕೊರಗು ಗಗನ ಮುಟ್ಟೋದ್ರಲಿದೇಂತ ತೋಚುತ್ತಪ್ಪ! ಎಂದರೂ ನಮ್ಮ ಭಾವ—!

—"ಶನಿ"

—— o ——



# ನೀತಿಯು ಕತೆಗಳು

( ಬಲಿತವರಿಗೆ )

---

ಒಂದು ದೇಶದಲ್ಲಿ ಒಬ್ಬ ದೋರೆಗಾಯಿ ವ ಎಮುಕನಿದ್ದನಂತೆ. ಅವನಿಗೆ ಆಗಿನ ಕಾಲಕ್ಕೆ ತಕ್ಕಂತೆ ತನ್ನ ವಯಸ್ಸಿಗನುಗುಣವಾದ ಒಂದು ಹೆಂಡತಿ, ತನ್ನ ಚಪಲ ಜಬರ್‌ಕಾಯಲು ಒಂದು ಚಿಕ್ಕ ಹೆಂಡತಿ ಇಬ್ಬರೂ ಇದ್ದರಂತೆ.

ಹಳೀ ನೆನಪುಗಳನ್ನು ನೆನೆಸಿಕೊಂಡು ಸುಖಪಡುವ ಕಾಲದಲ್ಲಿ ಅವನ ದೊಡ್ಡ ಹೆಂಡತಿ ಜತೆಗೆ ಹೋಗಿ ಮಾತಾಡುತ್ತಿದ್ದನಂತೆ. ಬಂದ ಗಂಡನನ್ನ ಮಣೆ ಮೇಲೆ ಕೂರಿಸಿ, ಅವನ ಬಿಳಿ ಟೋಪಿ ತೆಗೆದಿಟ್ಟು 'ಇದೇನು ಅಂದ್ರೆ! ತಲೆಯೆಲ್ಲಾ ಕೆದರಿದೆ ಎಂದು ಹೇಳಿ ತಲೆ ಬಾಚುತ್ತಾ ಬಾಚುತ್ತಾ, ವಯಸ್ಸಾಗುತ್ತಾ ಬಂತು ಇನ್ನು ಈ ಕರಿ ಕೂದಲು ಇರಬಹುದೇ? ಎಂದು ಸಿಕ್ಕಿದ ಕರೀ ಕೂದಲನ್ನೆಲ್ಲಾ ಕಿತ್ತುಹಾಕಲು ಶುರುಹಚ್ಚಿದಳಂತೆ—ಹಿಂದಿನ ಕಾಲದ ಇವನ ಸಾಮರ್ಥ್ಯ ಇವನು ಮಾಡಿದ ಸಾಹಸ ಕೆಲಸ, ಇವನ ದೇಶಸೇವೆ ಇತ್ಯಾದಿಗಳನ್ನೆಲ್ಲಾ ನೆನಪುಗೊಡುತ್ತಾ, ಮುದುಕೀಗೆ ತಕ್ಕ ಗಂಡ ಅನ್ನೋ ಹಾಗೆ ಬರೀ ಬಿಳಿ ಕೂದಲಿನ ಗಂಡುಸನ್ನಾಗಿ ಮಾಡಿದಳಂತೆ.

ನಾನೇನು ಅಷ್ಟು ಮುದುಕನೇ? ನಾನಿನ್ನೂ ದುಡಿಯಬಲ್ಲೆ, ನಾನಿನ್ನೂ ದೇಶಸೇವೆ ಮಾಡಬಲ್ಲೆ. ಈ ಎಳೀ ನಿಂಬೇಕಾಯಿಗಳಿಗೆಲ್ಲಾ ಬುದ್ಧಿ ಹೇಳಿ ಕೊಡಲೇ ಬೇಕು ಎಂದು ಹುಮ್ಮಸ್ಸು ಹತ್ತಿದಾಗ, ಕರೀ ಟೋಪಿ ಹಾಕ್ಕೊಂಡು, ಕಿರಿ ಹೆಂಡತಿ ಜತೆಗೆ ಕಾಲ ಕಳೆಯುತ್ತಿದ್ದನಂತೆ. ಅವಳು ಬಂದ ಗಂಡನ್ನ ಕುಡಿ ನೋಟದಿಂದ ಕೂರಿಸಿ, ಹತ್ತಿರ ಬಂದು, ಕರೀ ಟೋಪಿ ತೆಗೆದಿಟ್ಟು, 'ಇದೇನೂ ಅಂದ್ರೆ! ಹೀಗೆ ಇಳಿಜಾರಾಗಿ ತಲೆ ಬಾಚಿಕೋಬಹುದೇ? ಮುದುಕರ ಹಾಗೆ! ಗುಂಗುರು ಗುಂಗುರಾಗಿ ಕ್ರಾಪ್ ಬಾಚಿಕೋಬೇಕು, ನಾನು ಬಾಚುತ್ತೇನೆ ತಡೀರಿ ಅಂದು ಹೇಳಿ, ಪ್ಲಾಸ್ಟಿಕ್ ಬಾಚಣಿಗೆ ತಂದು, ಬಾಚುತ್ತಾ ಬಾಚುತ್ತಾ ಇದ್ದ ಬಿಳೀ ಕೂದಲುಗಳನ್ನೆಲ್ಲಾ ಕಿತ್ತು, ಕರೀ ಕೂದಲಿಗೇ ಗುಂಗುರು ಬರುವಂತೆ ಸುರುಳಿ ಸುತ್ತುತ್ತಿದ್ದಳಂತೆ. 'ನೋಡಿ ಅಂದ್ರೆ' ವನ ಮಹೋತ್ಸವ ಹೀಗೆ ಮಾಡಬೇಕು, ಹೆಚ್ಚು ಆಹಾರ ಹೀಗೆ ಬೆಳೀ ಬೇಕು

ಎಂಟು ಹೋತಗಳನ್ನ ಹೀಗೆ ಹೊಡೀಬೇಕು ಹದಿನಾರು ಹುಲಿಗಳನ್ನ ಹಾಗೆ ಬೇಟೆ ಆಡಬೇಕು. ಹೀಗೆಲ್ಲಾ ಮಾತಾಡುತ್ತಾ ಮಾತಾಡಿಸುತ್ತಾ, ತಲೇಲಿದ್ದ ಬಿಳಿ ಕೂದಲನ್ನೆಲ್ಲಾ ತಲೆ ಸಮ ಮಾಡಿದಳಂತೆ.

ಆವತ್ತು ಪರ್ವಕಾಲ. ದೋರೆಗಾಯಿ ಮುದುಕ ಹೊರಕ್ಕೆ ಬಂದು ಜೋರು ತೋರಿಸಿಕೊಳ್ಳಬೇಕು! ಚುನಾವಣಾ ದಿನ ತನ್ನ ಘನವಾದ ಅಭಿಮತ ವನ್ನು ಊರಿಗೆ, ದೇಶಕ್ಕೇ. ಲೋಕಕ್ಕೇ ಸಾರಬೇಕು. ಏನು ಮಾಡಲಪ್ಪಾ! ಅಂತ ತಲೆ ಕೆರೆದುಕೊಳ್ಳಲು ಹೋಗುತ್ತಾನೆ! ತಲೆಯೆಲ್ಲಾ ಭಟ್ಟ ತಲೆಯಾಗಿ ತ್ತಂತೆ. ಅನುಭವಸ್ಥ ಹಿರಿ ಹೆಂಡತಿ ಅಂತ ಅಂದರೆ ಅವಳು ಕರೀ ಕೂದಲು ಕಿತ್ತಳು. ಹುಮ್ಮಸ್ಸಿನ ಕಿರಿ ಹೆಂಡತಿ ಅಂತ ಅಂದರೆ ಅವಳು ಬಿಳೀ ಕೂದಲು ಕಿತ್ತಳು.

ಇಬ್ಬರ ಮಧ್ಯೆ ನನ್ನ ತಲೆ ಬೋಳಾಯ್ತು. ಇಬ್ಬರೂ ಹೇಳಿದ್ದು ಕೇಳೋವಾಗ ಚೆನ್ನಾಗಿಯೇ ಇತ್ತು. ಆದರೆ ತಲೆ ಬಾಚಿದ ಮೇಲೆ, ಸಾರಿಸಿ ಗುಡಿಸಿ ರಂಗೋಲಿ ಇಡೋಹಾಗೆ ಆಯಿತು.

ಅಂತ ಯೋಚಿಸಿ, ದೋರೆಗಾಯಿ ಮುದುಕ ತನ್ನ 'ವೋಟನ್ನು' ಚಲಾ ಯಿಸದೆ' ಹಾಗೆ ಮನೆ ಹೊಕ್ಕನಂತೆ—

★



ಕೊನೆಗೂ ಕಾರ್‌ನ ಜೀಪ್ over take ಮಾಡೇಬಿಡ್ತು!!!

# ಬಸ್ ಪ್ರಯಾಣ

ಹನ್ನೊಂದರಲ್ಲಿ ಹತ್ತಿದರೆ ಮೆಜಸ್ಟಿಕ್ ಹತ್ತಿರ ಇಳಿದು ಎರಡು ಫರ್ಲಾಂಗ್ ನಡೆದರೆ, ಎಂಟನೇ ನಂಬರ್ ಬಸ್ ಸಿಕ್ಕುತ್ತೆ. ಅದರಲ್ಲಿ ಕೂತರೆ ನೇರ ಬಸವನಗುಡೀಗೆ ಬೇಗ ಹೋಗಬಹುದು ಅಂದ ರಾಮು ಮಲ್ಲೇಶ್ವರದ ಬಸ್ ನಿಲ್ದಾಣದಲ್ಲಿ.

'ಆಗಲಪ್ಪಾ! ಅಂತ ಅವನಜ್ಜಿ ಹೇಳಿದಳು.'

"ಬಸ್ ಇಳಿದೂ, ನಡೆದೂ, ಹತ್ತುವುದಕ್ಕೆ ಬೇಜಾರಾದರೆ ಹದಿನೈದನೇ ನಂಬರ್ ಬಸ್ಸಿನಲ್ಲಿ ಹೋಗೋಣ. ಸ್ವಲ್ಪ ಸುತ್ತು ಅರ್ಧ ಗಂಟೆ ಹೊತ್ತಾಗಿ ಹೋಗುತ್ತೆ. ಆದರೆ, ಎಲ್ಲೂ ಇಳಿಯೋ ಗೋಜಿಲ್ಲ" ಅಂತ ಸ್ವಲ್ಪ ಯೋಚನೆ ಮಾಡಿ ಹೇಳಿದ ರಾಮು.

"ಆಗಲಪ್ಪಾ" ಅಂತ ಹೇಳಿದಳು ಅವನ ಅಜ್ಜಿ.

"ಅದರ ಬದಲು ನೇರ ಮೂರನೇ ನಂಬರಿನಲ್ಲಿ ಕೂತು ಮಾರ್ಕೆಟ್ ಚೌಕಕ್ಕೆ ಹೋಗಿ, ಅಲ್ಲಿಂದ ಬಸವನಗುಡೀಗೆ ಐದನೇ ನಂಬರಲ್ಲಿ ಹೋಗೋಣವೇ! ನಡೆಯೋ ಗೋಜಿಲ್ಲ" ಅಂತಂದ ರಾಮು.

"ಆಗಬಹುದು" ಅಂದಳು ಅಜ್ಜಿ.

"ಅಥವಾ ಏಳನೇ ನಂಬರು ಹಿಡಿದು, ಚರ್ಚಿನ ತನಕಾ ಹೋಗೋದು, ಅಲ್ಲಿಂದ ಒಂದು ಜಟ್ಕಾ ಮಾಡಿಕೊಂಡು ಹೋಗೋಣವೇ ಅದೂ ಸುಲಭ" ಅಂತಂದ ರಾಮು.

"ಆಗ....ಅನ್ನಲು ಬಾಯಿ ತೆರೆದಳು ಅಜ್ಜಿ. ಅಷ್ಟರಲ್ಲೇ ರಾಮು ಅಂದ—ಜಟಕಾ ಮೈಲಿಗೆ ಅಂತಲೇನೋ"

ಬಸ್‌ನಲ್ಲೇ ಹೋಗಬಹುದಂತೆ, ಜಟಕಾಕ್ಕೇನಪ್ಪಾ ಯಾವುದಾದರೂ ಆಗಬಹುದು ಹೇಗೆ ಹೇಳಿದರೆ ಹಾಗೆ ಅಂದಳು.

ಆಗಲೇ ರಾಮು ಅಂದಿದ್ದು. ಅಂದಹಾಗೇ ಮನೆಯಿಂದ ಹೊರಡೋವಾಗ ಅಮ್ಮನ ಹತ್ತಿರ ದುಡ್ಡೇ ಇಸುಕೊಂಡು ಬರಲಿಲ್ಲವಲ್ಲಾ!

ಅಷ್ಟು ಹೊತ್ತಿಗೆ ಹನ್ನೊಂದನೇ ನಂಬರ್ ಬಸ್ ಬಂತು ಅಜ್ಜಿ ಆರು ವರ್ಷದ ರಾಮೂನ ಸೊಂಟದ ಮೇಲೆ ಕೂಡಿಸಿಕೊಂಡು ಬಸ್ ಹತ್ತಿದಳು. ಈ ಮಗೂಗೂ ಟಿಕೆಟ್ ತೊಗೋಬೇಕೇಪ್ಪ ಅಂತ ಕಂಡಕ್ಟರನ್ನ ಕೇಳಿದಳು.

---

# ಕಾವಕ್ಕನ ಕಷ್ಟ

---

"ಈ ಸಾರಿ ನಮ್ಮ ಚಂದ್ರೂಗೆ ಖಾಯಿಲೆ ವಾಸಿ ಆದರೆ ...ಅವನಿಗೆ ನಂಜುಂಡೇಶ್ವರನ ಸನ್ನಿಧಿಯಲ್ಲಿ ಜುಟ್ಟು ಬಿಡಿಸ್ತೀನಿ" ಅಂತ ಮುಡುಪು ಕಟ್ಟಿಟ್ಟೆ ದೇವರ ಮನೆ ಮಂದಾಸನದಲ್ಲಿ. "ಮೂರು ವರ್ಷದ ಮಗು ಅಷ್ಟು ಕೆಂಡಾಮಂಡಲ ಜ್ವರ ಹೇಗಾದರೂ ತಡೆದೀತು, ಜ್ವರ ತಡೆದುಕೊಂಡರೂ ಡಾಕ್ಟರು ಕೊಡೋ ಇಂಜಕ್ಷನ್ನುಗಳನ್ನು ಹೇಗೆ ತಡೆದೀತು. ಇವೆರಡನ್ನು ತಡೆದರೂ ಬಾಲಾರಿಷ್ಟ ದೋಷವನ್ನು ಹೇಗೆ ತಡೆದೀತು ಬೇಗ ಮುಡುಪು ಕಟ್ಟಿಟ್ಟು ನಂಜುಂಡೇಶ್ವರನಿಗೆ ಹರಕೆ ಹೊತ್ತುಕೋ" ಅಂತ ನಮ್ಮಜ್ಜಿ ಹೇಳಿದ ಮೇಲೇ ನಾನು ಹಾಗೆ ಮಡಿಯಾಗಿ ಮುಡುಪು ಕಟ್ಟಿಟ್ಟೆ. ದೇವರು ದಯಮಾಡಿ ಈ ಮಗೂನ ನಮಗೆ ಉಳಿಸಿಕೊಟ್ಟರೆ ಆ ದೇವರಿಗೆ ಈ ಮಗುವಿನ ಕೂದಲನ್ನು ತಾನೇ ನಾವು ಕೊಡೋದು? ಇದಕ್ಕೇನು ಕಷ್ಟ! ಅಂತಲೇ ಮುಡುಪು ಕಟ್ಟಿದೆ.

ಆದರೂ ಮಗು ಈ ತಾಪತ್ರಯಗಳನ್ನು ತಡೆದುಕೊಂಡು ಬದುಕಿತು.

ಐದನೇ ವರ್ಷ ಆದಾಗ ಎಂಟು ದಿನ ರಜಾ ತೆಗೆದುಕೊಂಡು ಸಂಸಾರ ಸಮೇತ ನಂಜನಗೂಡಿಗೆ ಹೋದೆ. ದೇವಿ ಆಗಮಿಕರ ಮನೆ ಮುಂದಿದ್ದ ಒಂದು ಕೊಠಡಿಯಲ್ಲಿ ಬಿಡಾರ ಹಾಕಿದೆವು ಶುಕ್ರವಾರ ಮಧ್ಯಾಹ್ನ ಮೂರು ಗಂಟೆ ಹೊತ್ತಿನಲ್ಲಿ.

ಇನ್ನೂ ಹಾಸಿಗೆ ಟ್ರಂಕು ಇವುಗಳನ್ನ ಸರಿಮಾಡುತ್ತಾ ಇದ್ದೇವೆ. ಆಗಲೇ ಒಬ್ಬ ಮುದುಕಿ,—ಸುಮಾರು ೭೦ ವರ್ಷಗಳ ಪ್ರಾಯದ್ದು ಇರಬಹುದು—ಅದು ಒಂದು ಚೊಂಬು ಬಿಸಿ ಬಿಸಿ ಕಾಫಿಯನ್ನು ತಂದು, ನನ್ನ ಹೆಂಡತೀನ ಕರೆದು, "ಆಯಾಸಪಟ್ಟು ಬಂದಿದ್ದೀರಿ ದೇವರ ಸೇವೆಗೆ. ಈ ಕಾಫೀನ ತೊಗೊಂಡು ಎಲ್ಲರಿಗೂ ಕೊಡು. ಆ ಮೇಲೆ ಎಲ್ಲಾ ಸರಿಪಡಿಸಿಕೊಳ್ಳೋರಂತೆ. ನಾನು ಎದುರು ಕೊಠಡೀಲಿ ಇದ್ದೇನೆ. ಆಗಮಿಕರು ಹೇಳಿದರು. ಯಾರೋ ಬೆಂಗಳೂರಿನವರು ಈ ಕೊಠಡಿಗೆ ಯಾತ್ರಾರ್ಥಿಗಳಾಗಿ ಬರ್ತಾರೆ ಅಂತ ಬಂದೋರ ಬಾಯಿ ಒಣಗದೇ ಇರಲಿ ಅಂತ ಇದನ್ನ ತಂದುಕೊಟ್ಟೆ. ಮುಗಿದ ಮೇಲೆ ಆ ಚೊಂಬನ್ನ ನನ್ನ ಕೊಠಡೀಲಿ ಇರಿಸಿಬಿಡಮ್ಮಾ" ಎಂದು ಹೇಳಿ ಕೊಟ್ಟುಬಿಟ್ಟು ಹೋಯಿತು.

ಅದೇ ಮೊದಲ ಸರ್ತಿ ನಾವು ಕಾವಕ್ಕನ್ನ ನೋಡಿದ್ದು. ಆ ಮೇಲೆ ತಿಳಿಯುಬಂತು. ಕಾವಕ್ಕ ಒಬ್ಬ ದೊಡ್ಡ ಮನುಷ್ಯನ ಹೆಂಡತಿಯಾಗಿದ್ದಳು. ಎಂಟು ಹೆಣ್ಣು ಮಕ್ಕಳು ಅವರವರ ಗಂಡನ ಮನೆಗಳಲ್ಲಿದ್ದರು. ಅಳಿಯಂದಿರ ಮನೇಲಿ ಇರುವುದಕ್ಕೆ ಒಪ್ಪದೆ, ಗಂಡು ಮಗನ ತನಗುಳಿಯದೇ ಹೋದದರಿಂದ ಗಂಡ ಹೋದ ಮೇಲೆ, ದೇವರ ಸೇವೆ ಮಾಡಲು ಅನುಕೂಲ ಅಂತ ನಂಜನ ಗೂಡಿನಲ್ಲಿ ಬಂದು ತನ್ನ ಜೀವನ ಯಾತ್ರೆ ಮುಗಿಸಲು ಕಾಯುತ್ತಾ ಕೂತಿದ್ದಳು. ಆಗಮಿಕರ ಮನೆ ಎಡಕೊಠಡಿ ಬಾಡಿಗೆಗೆ ತೆಗೆದುಕೊಂಡು ದೇವರ ಸೇವೆ ಮಾಡೋದು ಹಾಗಿರಲಿ ದೇವರ ಸೇವೆಗೆ ಬಂದೋರ ಸೇವೆ ಮಾಡುತ್ತಾ ಕಾಲ ಕಳೆಯುತ್ತಾ ಇದ್ದಳು. ತನ್ನ ಪಾಡಿಗೆ ಸಾನಿರೋ ಅಷ್ಟು, ತಿಂಗಳಿಗೆ ಹಣ ಕೂಡ ಬರ್ತಾ ಇತ್ತು. ಎಪ್ಪತ್ತಾದರೂ, ದಿನಾಲೂ ನದೀಗೆ ಹೋಗಿ, ಸ್ನಾನ ಮಾಡಿ, ದೇವಸ್ಥಾನಕ್ಕೆ ಹೋಗಿ ನಮಸ್ಕಾರ ಹಾಕಿ, ಮನೇಗೆ ಬಂದು ತನ್ನ ಜೀವನ ನಡೆಸುತ್ತಾ ಇದ್ದಳು.— ಇತ್ಯಾದಿ ವಿಷಯಗಳೆಲ್ಲಾ ತಿಳಿದುವು.

ಎಂಟು ದಿವಸಗಳಲ್ಲಿ ನಾನೂ ಆಕೇನ ಕಾವಕ್ಕ ಅಂತ ಕರೆಯೋ ಅಷ್ಟು ಸಲಿಗೆಯಾಯ್ತು. ಆ ಎಂಟು ದಿನಗಳೂ ಕಾವಕ್ಕ ಇಲ್ಲದೆ ನಾವು ಏನು ಕೆಲಸ ವನ್ನೂ ಮಾಡೋ ಹಾಗೇ ಇರಲಿಲ್ಲ. ಬೀಗರ ಮನೇಲಿ ಇದ್ದ ಹಾಗೆ ಇದೇಮ್ಮಾ ಅಂತ ನಾನು ಒಂದು ಸಲ ಅಂದಾಗ, ಹೌದೇ ಹೌದು ! ನಿನ್ನ ಹೆಂಡತಿ ನನ್ನ ಮಗಳಿದ್ದಾಗೆ ಅಲ್ಲವೇ ? ಅಂತ ಆಕೆ ಅಂದು ನನ್ನ ಗಂಟಲನ್ನ ಏನೋ ಒತ್ತುವ ಹಾಗೆ ಮಾಡಿದ್ದರು.

ಚಂದೂ ಜುಟ್ಟು ಬಿಡಿಸಿ ದೇವರಿಗೆ ಸಮರ್ಪಿಸಿ, ಶಿವ ಕೂಟದಲ್ಲಿ ಉಂಡು, ಕಾವಕ್ಕನ್ನ ಬೀಳ್ಕೊಟ್ಟು, ನಮ್ಮೂರು ಸೇರಿದೆ. ಎಂಟೇ ದಿವಸದಲ್ಲಿ ನನಗೆ ನಂಜನಗೂಡಿಗೆ ವರ್ಗ ಅಂತ ಹುಕುಂ ಆಯಿತು. ನನ್ನ ಹೆಂಡತೀಗೆ ಬೆಂಗ ಳೂರು ಬಿಡಬೇಕು ಅಂತ ದುಃಖವಾದರೂ ಕಾವಕ್ಕನ ಊರಿಗೆ ಹೋಗ್ತೀವಲ್ಲಾ ಅಂತ ಸಡಗರವೇ ಸಡಗರ.

ನಂಜನಗೂಡಿಗೆ ಮೊದಲೇ ಬರೆದು, ಹಳೇ ಅಮಲ್ದಾರನ ಮನೆಯನ್ನೇ ನನಗಾಗಿ ಬಿಡಿಸಿಕೊಂಡು ಭಾನುವಾರ ಬೆಳಗ್ಗೆ ಆ ಮನೆ ಸೇರಿ ಸಂಸಾರ ಶುರು ಮಾಡಿದೆವು. ಹೊಸ ಅಮಲ್ದಾರ, ಮನೆಯಲ್ಲಿ ಎಲ್ಲಾ ಸಿದ್ಧತೆಗಳೂ ಸಮರ್ಪಕ ವಾಗಿದ್ದುವು. ಆದರೂ ಮಧ್ಯಾಹ್ನ ಮೂರು ಗಂಟೆಗೆ ನನ್ನಾಕೆ ಅಂದಳು. ಒಂದೆರಡು ನಿಮಿಷ ಕಾವಕ್ಕನ್ನ ಹೋಗಿ ನೋಡಿಕೊಂಡು ಬಂದುಬಿಡ್ತೇನೆ, ನೀವು ಮನೇ ನೋಡಿಕೊಳ್ಳಿ ಅಂತ. ನಾನಂದೆ. ಜವಾನರು ಹುಡುಗರು ಮನೆ ನೋಡಿಕೋತಾರೆ ಇಬ್ಬರೂ ಹೋಗಿ ಎರಡು ಮಾತಾಡಿಸಿಕೊಂಡು ಬೇಗ ಬಂದುಬಿಡೋಣ ಅಂತ.

ಇಬ್ಬರೂ ಬೇಗ ಹೋಗಿ ಕಾವಕ್ಕನ್ನ ನೋಡಿದೆವು. ಅದೇ ಆಗವಿಸಾಕರ ಮನೆಯ ಎಡಭಾಗದ ಕೊಠಡಿಯಲ್ಲಿ. ಆದರೆ ಕಾವಕ್ಕನ ಕೊಠಡಿಯಲ್ಲಿ ಕಾವಕ್ಕನ ಜತೆಗೆ ಇನ್ನೊಂದು ಮುದುಕಿ ಮಾತಾಡ್ತಾ ಕೂತಿತ್ತು. ನಮ್ಮನ್ನು ನೋಡಿ ಕಾವಕ್ಕ ಎದ್ದುಬಂದು ಚಾಪೆ ಹಾಸಿ ಕೂರಿಸಿ ಯಾವಾಗ ಬಂದ್ರಿ, ಏನು ಅಡಿಗೆ ಚಂದು ಚೆನ್ನಾಗಿದ್ದಾನೆಯೇ ಇತ್ಯಾದಿ ಕೇಳಿದ ಮೇಲೆ, ಆ ಮುದು ಕೀನ ತೋರಿಸಿ, ಅವಳು ಸಾತಕ್ಕ ಅಂತ ನನ್ನ ಅಕ್ಕ, ಕಿವಿ ಸ್ವಲ್ಪ ಮಂದ. ನನಗಿಂತ ನಾಲ್ಕು ವರ್ಷ ಹಿರಿಯಳು. ಸಂತೇಬಾಚಹಳ್ಳೀಲಿ ಮೊಮ್ಮಗಳ ಮನೇಲಿ ಇದ್ದಾಳೆ. ಬೇಜಾರಾಯ್ತು, ತಂಗಿ ಹೇಗಿದ್ದಾಳೋ ಅಂತ ಇಲ್ಲಿಗೆ ಬಂದಿದ್ದಾಳೆ. ಮುದುಕೀರನ್ನ ಕಾಪಾಡೋದು ಕಷ್ಟವಮ್ಮಾ ಅಂತ ನನ್ನ ಹೆಂಡತೀಗೆ ಹೇಳಿದಳು. ಆ ಮೇಲೆ ನಾವು ನಮ್ಮ ಪ್ರವರಾ ಎಲ್ಲಾ ಹೇಳಿದ್ದು. ಆಗಲೇ ಆಕೇನೂ ಅಂದಿದ್ದು, "ಏನೋಪ್ಪಾ! ನೀನು ಈ ಊರು ಅಮಲ್ದಾರ ನಾಗಿ ಬಂದಿದ್ದೀಯಾ! ಅಂದರೆ ದೇವಸ್ಥಾನದಲ್ಲಿ ನಿನಗೆ ರಾಜಮರ್ಯಾದೆ! ನೀನೊಂದು ಕೆಲಸ ಮಾಡಿಸಬೇಕು ನೋಡು, ದೇವಸ್ಥಾನದಲ್ಲಿ ಗಣಪತಿ ಮುಂದೆ ದಿನಾಲೂ ನಾನು ಒಂದು ತುಪ್ಪದ ದೀಪ ಹಚ್ಚುತ್ತೇನೆ, ನನ್ನ ಹೋದ ಒಬ್ಬನೇ ಮಗನ್ನ ನೆನೆಸಿಕೊಂಡು, ನಾನು ಈ ಕಡೆ ಬಂದರೆ ಆ ಕಡೆ ಆ ದೀಪ ಆರಿಸಿ, ತುಪ್ಪ ಕದ್ದುಬಿಡ್ತಾರೆ. ಅದನ್ನು ಸರಿಮಾಡಿಸಪ್ಪಾ! ಅಂದರು. ಅದ ಕ್ಕೇನು? ಕಾವಕ್ಕ! ನಾಳೆಯಿಂದಲೇ ಆ ತುಪ್ಪದ ದೀಪಕ್ಕೆ ಪಹರೆ ಹಾಕಿಸ್ತೇನೆ ಅಂದಾಗ ಕಾವಕ್ಕನ ಮುಖ ನೋಡಬೇಕಿತ್ತು! ಸತ್ತ ಮಗ ಎದ್ದು ಬಂದ್ದಾಗಿತ್ತು ಆಕೆಯ ಮುಖದ ಕಳೆ!

ಆಮೇಲೆ ವಾರಕ್ಕೊಂದು ಸರ್ತಿ ಕೂಡ ಕಾವಕ್ಕನ ಕೊಠಡೀಗೇ ಹೋಗಿ ಮಾತನಾಡಲು ಅರ್ಧಗಂಟೆ ವಿರಾಮ ಕೂಡ ಸಿಗ್ತಾ ಇರಲಿಲ್ಲ. ಆದರೆ ನನ್ನ ಹೆಂಡತಿ ದಿನಾಗಲೂ ಮಧ್ಯಾಹ್ನ ಅಲ್ಲಿಗೆ ಐದು ನಿಮಿಷ ಹೋಗಿ, ಮಾತಾಡಿಸಿ ಕೊಂಡೇ ಬರ್ತಾ ಇದ್ದಳು. ರಾತ್ರಿ ಊಟದ ಹೊತ್ತಿಗೆ ಆ ವರದಿಯನ್ನು ನನಗೆ ಒಪ್ಪಿಸುತ್ತಿರ್ತಾ ಇದ್ದಳು.

ಸಾತಕ್ಕ ಮದುವೆಯಾಗಿ ಸಂತೇಬಾಚಹಳ್ಳೀಗೆ ಹೋದಾಗ ಹನ್ನೆರಡು ವರ್ಷ ವಯಸ್ಸಂತೆ. ಆಗ ಕಾವಕ್ಕ ಲಂಗ ಹಾಕ್ಕೊಂಡು ಮಗ್ಗಿನ ಜಡೆ ಹಾಕ್ಕೊಂಡು ಮದುವೆ ಮನೇಲಿ, ಎಂಟು ವರ್ಷದ ಹುಡುಗಿಯಾಗಿ ದಂಟು ದಂಟು ಅಂತ ಸುತ್ತಾಡ್ತಾ ಇದ್ದಳಂತೆ ಸಾತಕ್ಕ ಕಾವಕ್ಕನ್ನ ಆಗಾಗ್ಗೆ ಗದರಿಸಿ ಕೊಂಡು "ಕಾವೂ ಹಾಗೆಲ್ಲಾ ಚಲ್ಲುಚಲ್ಲಾಗಿ ಆಡಬೇಡ. ಇನ್ನೆರಡು ವರ್ಷಕ್ಕೆ ಮದುವೆಯಾಗಬೇಕು. ಇನ್ನು ನಾಲ್ಕು ವರ್ಷಕ್ಕೆ ಸಂಸಾರ ಹೂಡಬೇಕು. ಹೀಗೆ ಆಡಬಹುದೇ? ಅಂತ ಬುದ್ಧಿಹೇಳಿ ಕೆನ್ನೆ ಚಿವುಟುತ್ತಿದ್ದಳಂತೆ.

ಈಗಲೂ, ಶಾವಕ್ಕನಿಗೆ ೭೦ ವರ್ಷ ಆದಾಗ, ಎಂಟು ಹೆಣ್ಣು ಮಕ್ಕಳು, ೪೦ ಮೊಮ್ಮಕ್ಕಳನ್ನು ಪಡೆದ ಮೇಲೂ, ಕೂಡ ಸಾತಕ್ಕ ತಂಗೀನ ನೋಡುಕ್ಕೆ ಬಂದಾಗ ಅದೇ ರೀತಿ, "ಶಾವ್ರೂ, ಏನೇ ವಯಸ್ಸಾಯಿತು ನಿನಗೆ. ಗಂಡನ್ನ ತಿಂದುಕೊಂಡೆ, ಮೂರು ಹೆಣ್ಣುಮಕ್ಕಳನ್ನ ತಿಂದುಕೊಂಡೆ, ನಾಲ್ಕು ಮೊಮ್ಮಕ್ಕಳನ್ನ ತಿಂದುಕೊಂಡೆ, ಆದರೂ ಚಲ್ಲುಚಲ್ಲಾಗಿ ಬಂದ ಯಾತ್ರೀಕರ ಬಾಯಿ ಒಪ್ಪಮಾಡಲು ಕಾಫಿ ತೆಗೊಂಡು ಹೋಗಿಕೊಡ್ತಿ. ಬಂದವರು ಯಾರು ಅಂತ ಗೊತ್ತಿಲ್ಲ ನಿನಗೆ, ಅವರನ್ನೇ ಮಕ್ಕಳ ಹಾಗೆ, ಮೊಮ್ಮಕ್ಕಳ ಹಾಗೆ ಆಡಿಸುತ್ತಾ ಇರ್ತೀ, ಇನ್ನೂ ನಿಂಗೆ ಬುದ್ಧಿ ಬರಲಿಲ್ಲವಲ್ಲೇ!" ಅಂತ ಬೆಳಗ್ಗೆ ನದೀಗೆ ಹೋಗುವಾಗ, ಮಧ್ಯಾಹ್ನ ತಾವೇ ಅಡಿಗೆ ಮಾಡಿದ್ದನ್ನು ಉಣ್ಣುವಾಗ, ಸಾಯಂಕಾಲ ಹೂಬತ್ತಿ ಮಾಡ್ತಾ ಪುರಾಣ ಕೇಳೋವಾಗಲೆಲ್ಲಾ, ತಂಗೀಗೆ ಬುದ್ಧಿ ಹೇಳ್ತಾ ಇದ್ದಳಂತೆ.

ಶಾವಕ್ಕನಿಗೆ ಬೇಜಾರು. ಒಂದೇ ಹೊಟ್ಟೇಲಿ ಮೊದಲು ಹುಟ್ಟಿದ ಅಕ್ಕ. ಅವಳ ಮಾತಿಗೆ ಎದುರು ಮಾತು ಆಡೋಹಾಗಿಲ್ಲ ಆದರೂ ಅಕ್ಕ ಅಂದಿದ್ದನ್ನ ಅನುಭವಿಸಕ್ಕೂ ಆಗುಲ್ಲ. "ಎಲ್ಲಾ ಕಳಕೊಂಡು ನಾನಿಲ್ಲಿ ದೇವರೇ ಅಂತಿದೀನಿ. ಇರೋದನ್ನು ಸುಖವಾಗಿ ನನ್ನ ಕಣ್ಣ ಮುಂದೆ ಕಾಪಾಡಪ್ಪಾ! ಅಂತಿದೀನಿ. ಈಗ ಬಂದು ಹೀಗೆ ಮಾಡಬಾರದು ಅಂತ ಬುದ್ಧಿವಾದ ಹೇಳ್ತಾಳಲ್ಲಾ ನಮ್ಮಕ್ಕಾ—ಸಾಯೋ ಮುದುಕೀಗೆ—ನಾನುತಾನೇ ಏನು ಮಾಡಲಿ ಅಂತ.

ಸಾತಕ್ಕನಿಗೂ ಹಾಗೇ, ಎಲಾ! ಅಪ್ಪ ಅಮ್ಮ ಎಲ್ಲರನ್ನೂ ಕಳೆದುಕೊಂಡಳು. ನಾನು ದೊಡ್ಡೋಳು ಅಂತ ಇದ್ದರೂ ಏನೂ ಮಾಡುಕ್ಕಾಗಲಿಲ್ಲ ಇವಳಿಗೆ ಚಿಕ್ಕವಯಸ್ಸಿನಲ್ಲಿ ಆ ಮೇಲೆ ನನ್ನ ಸಂಸಾರದ ಕಷ್ಟಗಳೇ ನನಗೆ ಹೆಚ್ಚಾಯ್ತು. ಮುದಿ ಗಂಡನ್ನ ಮೊದಲೇ ಕಳೆದುಕೊಂಡೆ. ಇದ್ದೊಬ್ಬ ಮಗನನ್ನೂ ಪ್ಲೇಗುಮಾರಿಗೆ ತೆತ್ತೆ. ಅವನ ಮಗೂನ ಗಿಣಿಸಾಕಿದ ಹಾಗೆ ಸಂತೇಬಾಚಹಳ್ಳಿಯಲ್ಲಿ ಸಾಕಿ ಸಲಹಿ ಮನುಷ್ಯನನ್ನಾಗಿ ಮಾಡಿದೆ. ಈಗ ಸ್ವಲ್ಪ ವಿರಾಮ ಸಿಕ್ಕಿದೆ. ತಂಗೀಗೆ ಈಗಲಾದರೂ ಬುದ್ಧಿ ಹೇಳಿ ಬಾಳೋಹಾಗೆ ಮಾಡೋಣ ಅಂದರೆ, ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ? ಎನ್ನೋ ಹಾಗೆ, ಈಗ ಸಾಧ್ಯವಾಗುಲ್ಲವಲ್ಲಾ! ಅಂತ ಸಾತಕ್ಕನ ಗೋಳು ಕತೆ.

ಈ ಹಿರಿಯಕ್ಕನ ಚಾಳಿ, ಕಿರಿಯಕ್ಕನ ಗೋಳು ಕೇಳಿ ಕೇಳಿ ನನ್ನ ಹೆಂಡತೀಗೇ ಬೇಜಾರು. ಸಾತಕ್ಕ ಹೇಳೋದು ನ್ಯಾಯ ಆದರೆ ಅದಕ್ಕೆ ವ್ಯತಿರಿಕ್ತವಾಗಿ ಶಾವಕ್ಕ ಮಾಡೋದೂ ನ್ಯಾಯ ಅಂತಲೇ ನನ್ನ ಹೆಂಡತಿ ತೀರ್ಮಾನ.

ಇವತ್ತು ನದೀಗೆ ಸ್ನಾನಕ್ಕೆ ಹೋಗಬೇಡ, ಮಂಡಿ ನೋವು ಅಂತಾ ಇದಿ ಅಂತ ಸಾತಕ್ಕ ಹೇಳದರೆ,

ನನಗೇನು ಅಂಥಾ ವಯಸ್ಸಾಗಿ ವಾಯುರೋಗ ಬಂದಿರೋದು ಹೋಗೇ ಹೋಗ್ತೀನಿ ನದೀ ಸ್ನಾನಕ್ಕೆ ಅಂತ ಕಾವಕ್ಕನ ಉತ್ತರ.

ಕೆಟ್ಟಕೆಟ್ಟದಾಗಿ ತೇಗ್ತಾ ಇದ್ದೆ ಕಾವೂ! ಇವತ್ತು ಅರಳುಹಿಟ್ಟು ಹಾಲು ಸಕ್ಕರೆ ಕಲಸಿಕೊಂಡು ತಿಂದುಬಿಡು. ಮೈಗೆ ತಂಪು ಅಂತ ಸಾತಕ್ಕ ಹೇಳಿದರೆ, ನನಗೇನಾಗಿದೆ ತಂಪುಮಾಡಿಕೊಳ್ಳಕ್ಕೆ ಅಂತ ಕೆಂಡರೊಟ್ಟೇನೆ ತಿಂತಾ ಇದ್ದಳು. ಕಾವಕ್ಕ.

ನಿನ್ನೆ ರಾತ್ರಿ ಎಲ್ಲಾ ಕನವರಿಸಿಕೊಳ್ತಾ ಇದ್ದೆ. ಇವತ್ತು ಏಕಾದಶೀಗೆ ಬರೀ ಕಿತ್ತಳೆಹಣ್ಣು ಹಾಲು ಮಾಡಿಕೊಳ್ಳೇ ಅಂತ ಸಾತಕ್ಕಾ ಹೇಳಿದರೆ, ಅಗಮೀಳರ ಮನೇಲಿ ಕೊಟ್ಟ ಹಲಸಿನ ತೊಳೆ ಎರಡನ್ನೇ ತಿಂದು ಕಾವಕ್ಕ ಏಕಾದಶಿ ಆಚರಿಸೋಳು.

ಹೀಗೆ ಮುದುಕಿಯರಿಬ್ಬರ ಜಗಳ ದಿನಾಲೂ ರಾತ್ರಿ ಊಟಮಾಡುವಾಗ ನನ್ನ ಹೆಂಡತಿ ನನಗೆ, ಹೇಳುತ್ತಾ ಇದ್ದಳು. ಕಾವಕ್ಕ ಮಾಡಿದ್ದೇ ನ್ಯಾಯ ಅನ್ನೋ ರೀತಿಯಲ್ಲಿ ಬಣ್ಣಕಟ್ಟಿಯೇ ಹೇಳುತ್ತಿದ್ದಳು. "ನೋಡೀ ಅಂದ್ರೆ. ಮುಪ್ಪಿನ ಮುದುಕೀನ ಹುರಿದು ಮುಕ್ಕಕ್ಕೆ ಅಂತಲೇ ಸಾತಕ್ಕ ಬಂದ ಹಾಗಿದೆ" ಅಂತ ಮುಕ್ತಾಯ ಮಾಡ್ತಾ ಇದ್ದಳು.

ಒಂದು ರಾತ್ರಿ ನನ್ನ ಹೆಂಡತಿ ಈ ವರದಿ ಒಪ್ಪಿಸಲು ಶುರುಮಾಡೋವಾಗ ಬಲು ಖುಷಿಯಾಗಿದ್ದಳು. ಆ ಮಧ್ಯಾಹ್ನ ಕಾವಕ್ಕನ್ನ ನೋಡುಕ್ಕೆ ಹೋಗಿದ್ದಾಗ, ಕಾವಕ್ಕ ಇತ್ತಿಲ್ಲವಂತೆ. ಸಾತಕ್ಕ ಹೇಳಿದಳಂತೆ. "ನೋಡಮ್ಮ! ಹೊಟ್ಟೇಲಿ ಬಿದ್ದ ತಂಗಿ ಸ್ವಲ್ಪ ಆರೈಕೆಮಾಡಿ ಹೋಗೋಣ ಅಂತ ಬಂದೆ. ನನ್ನ ಮಾತೇ ಕೇಳುಲ್ಲ ಅವಳು. ನನಗೇ ಉಪಚಾರಮಾಡುಕ್ಕೆ ಬರ್ತಾಳೆ. ನೀನು ಮುದುಕಿ ಕೂತಿರು ನಾನು ಮಾಡ್ತೀನಿ ಅಂತಾಳೆ. ಈ ಜವಾಬ್ದಾರಿ ನಾನು ಹೊರುಕ್ಕೆ ಇನ್ನು ಆಗುಲ್ಲಮ್ಮ, ನಾಳೆ ನಾನು ಸಂತೇಬಾಚಹಳ್ಳೀಗೆ ಹೋಗ್ತೀನಿ ಅವಳ ಪಾಡು ನಂಜುಂಡೇಶ್ವರ ನೋಡಿಕೋಬೇಕು ನೀನೂ ಆಗಾಗ್ಗೆ ವಿಚಾರಿಸಿಕೋಮ್ಮ ಅಂತ ಹೇಳಿ ಇವಳನ್ನು ಆಶೀರ್ವಾದಮಾಡಿ ಕಳಿಸಿಕೊಟ್ಟಳಂತೆ.

"ಇನ್ನು ಬಿಡಿ ಅಂದ್ರೆ! ಕಾವಕ್ಕ ಸುಖವಾಗಿರ್ತಾಳೆ" ಅಂತ ಆ ದಿನ ಹೆಪ್ಪುಹಾಕಿದ ಮೊಸರನ್ನೇ ಬಡಿಸಿದಳು—ಕಾವಕ್ಕನ್ನ ಸಾಕುಮಗಳು.

— ಶಿವು.



# ?

ಅಶಿತಪರಿಗತಿ ಸುಲಭ ಓಟು ಬೇಟೆ
ಅರಿಯಾದವ ಕಳಕೊಂಬ ಗಂಟುಮೂಟೆ

ಬೈಗಳೇ ಬಾಣಗಳು ಕೂಗಾಟ ಬಿರುಸು
ಜಾತಿ ಮತ್ಸರ ಗೋಮುಖ ವ್ಯಾಘ್ರಗೊರಸು

ಲಂಚ ನೀಡಲು ಶಂಖ, ಖಾಲಿಯಾಸೆಯು ಕಹಳೆ
ಥಳ ಥಳಿಪ ಮಾತು ಮಳೆ ಮೋಹರಗಳೆ

ಗಾಂಧಿ ಮಂತ್ರವೆ ತಂತ್ರ, ಭ್ರಾಂತಿ ಮಾತೇ ಮಾಟ
ಶಾಂತಿ ಸೂತ್ರವದೊಂದೆ ಕಪಟ ಪಾಠ

ಗುಡುಗು ಸಿಡಿಲಿನ ರೋಷ ಜಯಗಳಿಪ ಘೋಷ
ಗಗನ ಕುಸುಮವೆ ಹಾರ, ಬರಿ ತಂತ್ರ ಮೋಸ.

---








# VITOFERRIN

TRADE  MARK



MYSORE INDUSTRIAL & TESTING LABORATORY LTD. MALLESWARAM BANGALORE

# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

★ ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್ ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಕಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹ ದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ. ★



ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿಮಿಟೆಡ್**

ಮಲ್ಲೇಶ್ವರಂ - - - ಬೆಂಗಳೂರು 3.

REG. No. M. 4718 KORAVANJI DEC. 1951

## 30—11—1951 ರಿಂದ ಪ್ರಾರಂಭ



—: ಆಲ್ ಇಂಡಿಯಾ ಪಿಕ್ಚರ್ಸ್‌ರವರ :—

# ನಜ್‌ನೀನ್-NAZNEEN

ಮಧುಬಾಲ, ನಾಸಿರ್ ಖಾನ್, ಓಂಪ್ರಕಾಶ್, ಆಗಾ
ಚಂಚಲ್, ಜಯಂತ್, ಕುಕ್ಕೂ.



**ಬೆಂಗಳೂರು : ಮೆಜೆಸ್ಟಿಕ್**

| ಮಂಗಳೂರು | | ಹಾಸನ | | ಕೆ. ಜಿ. ಎಫ್. |
|---|---|---|---|---|
| **ರೂಪವಾಣಿ** |  | **ಇಂಪೀರಿಯಲ್** |  | **ಒಲಂಪಿಯಾ** |

ಟಾಕೀಸುಗಳಲ್ಲಿ ಏಕಕಾಲದಲ್ಲಿ ಪ್ರದರ್ಶನಾರಂಭ.



—: ಶೀಘ್ರದಲ್ಲಿಯೇ :—

ಮೈಸೂರು ರಣಜಿತ್ ಟಾಕೀಸಿನಲ್ಲಿ ನಿರೀಕ್ಷಿಸಿ.

A TALLAM RELEASE

Printed by B S Iyengar, Bangalore City
Publisher—B N. Gupta Editor—M. Sivaram